


ಸಂಪುಟ ೧೧ ಏಪ್ರಿಲ್ ೧೯೫೨ ಸಂಚಿಕೆ ೧

## "ಕಣಿ"

ನಮ್ಮ ದೇಶದಲ್ಲಿ ಯಾವ ಕೆಲಸ ಆಗಲಿ, ಆಗದೇ ಇರಲಿ, ಗಡಿಯಾರ ಪಂಚಾಂಗ ಮಾತ್ರ ದಿನದಿನವೂ ಮುಂದಕ್ಕೆ ಹೋಗಿ ವರ್ಷ ಅನ್ನೋದು ಆಡಿದ ಹಾಗಿ ಕಳೆದು ಹೋಗುತ್ತೆ "ಆಡಿದ ಹಾಗೆ ಅಂತೀರಲ್ಲ? ಈ ವರ್ಷ ಆಡ್ತಾ ಎಲ್ರೀ ಕಳೆದವು ಹೊಟ್ಟೆಗೆ ಹಿಟ್ಟಿಲ್ಲ. ಜುಟ್ಟಿಗೆ ಕ್ರಾಪಿಲ್ಲ, ದುಡ್ಡಿದ್ದಾಗ ಬಟ್ಟೆ ಇಲ್ಲ. ಬಟ್ಟೆ ಸಿಕ್ಕಾಗ ದುಡ್ಡಿಲ್ಲ ನಮ್ಮನೇಲಿ ನಮ್ಮಾಕೆ ಮುಂದೇನು ತಂತ್ರ ಹೂಡ್ತಾಳೋ ಅನ್ನೋ ಯೋಚನೆಹಾಗಿರಲಿ ಚರ್ಚಿಲ್ ನಾಳೆ ಏನು ಮಾಡ್ತಾನೋ ಸ್ಟಾಲಿನ್ ಹೇಗೆ ಮುಂದುವರೀತಾನೋ ಈ ಯೋಚನೆ ಇನ್ನೂ ನಮಗೆ ಹೆಚ್ಚಾಗಿ ಅಂಟಿದೆ. ಮುಂದೆ ಆಗಬಹುದಾದನ್ನೇ ಇಂದು ಯೋಚಿಸಿ ಇಂದಿನ ಶಾಂತಿ ಕೂಡ ಸೊನ್ನೆ ಆಗಿದೆ" ಇದನ್ನ "ಆಡಿದಹಾಗೆ ಅಂತ ನೀವು ಅನ್ನ ಬಹುದೇ?" ಅಂತ ನೀವು ಕೇಳ ಬಹುದು. ಕೇಳ ಬೇಕಾದದ್ದೇ! ಆಳುತಾ ಆಡಿ ಸೋತವರಹಾಗೆ ಅಂತ ಸಮಾಧಾನ ಹೇಳಬಹುದು ಅಲ್ಲವೇ? ಇದಕ್ಕೆಲ್ಲಾ ಕಾರಣ ವರ್ಷದ ಹೆಸರೇ ಇರಬಹುದೋ ಎನ್ನಿಸುತ್ತೆ. ಖರ ಎಂದರೆ ಖಳನ ಜ್ಞಾಪಕ ಬರುತ್ತೆ. ಕಾಳ ಸಂತೆಯ ಖಳರ ವರ್ಷ ಮುಗಿಯಿತು ಸಾಮಗ್ರಿಗಳ ಬೆಲೆ ಇಳಿಯುವಂತೆ ಸೂಚನೆ ಇತ್ತು ಅಂದಮೇಲೆ ಮುಂದೆ ರವ ನಂದನ ಸಂವತ್ಸರದಲ್ಲಿ ನಮ್ಮ ದೇಶವು ನಂದನವನದಂತೆಯೇ ಹಸುರು ಹಚ್ಚಾಗಿ ಜನರ ಮನಸ್ಸು ತೃಪ್ತಿ ಆನಂದಮಯವಾಗಿ ಜೀವನವು ನಗೆ

ಯಾಡಿದ ಹಾಗೆ ಸಾಗಲಿ ಎಂದು ನಾವು ಮಹೇಶ್ವರನಲ್ಲಿ ದೈನ್ಯತೆಯಿಂದ ಪ್ರಾರ್ಥಿಸುತ್ತೇವೆ.

ಕೊರವಂಜಿಗೆ ಈ ಸಾರಿ ವಿಜೃಂಭಣೆಯ ಹುಟ್ಟಿದ ಹಬ್ಬ ಮಾಡಿಕೊಳ್ಳಲು ಸಾಕಷ್ಟು ಹುಮ್ಮಸ್ಸೇ ಇಲ್ಲ ನಾನು ಮೆರೆದರೆ ನನ್ನ ಸಂತೋಷಕ್ಕೆ ಮಾತ್ರವೇ ಅಲ್ಲ. ಕಣಿ ಕೇಳಿದವರೂ ಖುಷಿಯಾಗಲಿ ಅಂತ. ಆದರೆ ಕಣಿ ಕೇಳಿದವರು ಖುಷಿಯಾದರು ಅನ್ನುವುದು ನನಗೆ ರುಜುವಾತಾಗಿಲ್ಲವಾದ್ದರಿಂದ ಈ ವಿಜೃಂಭಣೆ ಬೇಡ. ಶಾಸ್ತ್ರಕ್ಕೆ ಹಬ್ಬ ಆಚರಿಸುತ್ತೇನೆ ಎಂದು ಕೊರವಂಜಿಯು ಸಧ್ಯಕ್ಕೆ ನಿರ್ಧರಿಸಿದ್ದಾಳೆ

ಕೊರವಂಜಿಗೆ ನೆರವು ನೀಡಿದ ಲೇಖಕ ಲೇಖಕಿಯರಿಗೂ, ಪೋಷಕ ಜಾಹೀರಾತುಗಳನ್ನು ಕೊಟ್ಟ ಮಿತ್ರರಿಗೂ, ಸಹಕರಿಸಿದ ಓದುಗರಿಗೂ, ಧನ್ಯವಾದಗಳನ್ನು ಅರ್ಪಿಸುವುದು ಸಹಜವಾಗಿಯೂ ನಮಗೆ ಹೆಮ್ಮೆಯ ವಿಷಯ.

" ನಗೆಗನ್ನಡಂ ಗೆಲ್ಗೆ "

---

## ಕುಹಕಿಡಿಗಳು

ಭಾರತದಲ್ಲಿ ಬಿಸಿಲಿನ ಬೇಗೆ ಹೆಚ್ಚಾದುದರಿಂದ ಸರ್ಕಾರದ ಕಾರ್ಯಕಲಾಪಗಳು ಬಲು ಸಾವಕಾಶ. (ಲೇಖಕ)

—ಛೆ! ಛೆ! ಕಳೆದ ಒಂದು ತಿಂಗಳಲ್ಲಿ ಎಷ್ಟು ಕೆಲಸ ಸಾಧಿಸಿಲ್ಲ! ಕೆಲವು ಸರ್ಕಾರಗಳು

• • •

ಮಧ್ಯ ವಯಸ್ಸಿನ ಹೆಂಗಸರು ಮೋಟಾರು ಸಾರಥಿಗಳಾದರೆ ಸುರಕ್ಷತೆ ಉಂಟು.

—ಹೌದು, ಮೂವತ್ತರೊಳಗಿರಲು ಅವರು ಪ್ರಯತ್ನಿಸಿ ಜಯಿಸುತ್ತಾರೆ ಅಲ್ಲವೆ?

• • •

ವರ್ಷದ ತೊಡಕಿನ ದಿವಸ ಲೆಜಿಸ್ಲೆಟಿವ್ ಕೌನ್ಸಿಲ್ಲಿಗೆ ಚುನಾವಣೆ ನಡೆದರೆ, ವರ್ಷವೆಲ್ಲಾ ಮರು ಚುನಾವಣೆ ಆಗುತ್ತದೋ? ಎಂದು ಸಂಶಯ ಬರುತ್ತಲ್ಲವೆ?

— o —

# ಉಂಗಾಲು

ಎಣ್ಣೆ ಸಂಬಂಧವಾದ ಮಾತುಕತೆಗಳು ಹೇಗೆ ಕೊನೆಗಂಡಿತು, ಹಣ್ಣೋ ಕಾಯೋ ಎಂದು ಕೇಳಿದಾಗ, ಯಾರೋ ಒಬ್ಬರು, ಶೀಗೇಕಾಯಿ, ಎಂದು ಉತ್ತರ ಹೇಳಿದರಂತೆ.

* * *

ಪಾನ ನಿರೋಧಕ್ರಮ ಅರ್ಧದಷ್ಟು ಜಯಪ್ರದವಾಗಿದೆ (ಬೊಂಬಾಯಿವರದಿ) 'ಪಾನ'ಕ್ಕೆ ಜಯ, 'ನಿರೋಧ'ಕ್ಕೆ ಅಪಜಯ.

* * *

ದೆಹಲಿಯಿಂದ ಬದರೀನಾಥಕ್ಕೂ ಕೇದಾರನಾಥಕ್ಕೂ ಟೆಲಿಫೋನ್ ವ್ಯವಸ್ಥೆಯನ್ನು ಇಷ್ಟರಲ್ಲೇ ಜಾರಿಗೆ ತರಲಾಗುತ್ತೆ (ಸುದ್ದಿ) ಅಲ್ಲಿಂದ ತಿರುಪತಿಗ ಬೇಡವೇನು?

* * *

ಇನ್ನು ಎರಡು ತಿಂಗಳಕಾಲ ಮದುವೆ ಲಗ್ನಗಳು ಯಾವುದೂ ಇಲ್ಲ ವಂತೆ ...ಸದ್ಯಃ, ಮಂತ್ರಿ ಸಂಪುಟಗಳೆಲ್ಲ ಇತ್ಯರ್ಥವಾಗುವತನಕ, ವರಾನ್ವೇಷ ಕರಿಗೂ ಪುರಸತ್ತು ಬೇಕಿತ್ತು.

* * *

ಸಕ್ಕರೆ ರೇಷನ್ನನ್ನು ನಾಳೆಯಿಂದ ದ್ವಿಗುಣಪಡಿಸಲಾಗಿದೆ....ಕೊಡೋದನ್ನೇ ಕೊಂಡುಕೊಳ್ಳಲು ಕಾಸಿಲ್ಲದೆ ಪೇಚಾಡುತ್ತಿರುವ ಎನ್. ಜಿ. ಓ. ಗಳಿಗೆ ಇದೊಂದು ಹೊಸ ಹಿಂಸೆ.

* * *

ಇಂಡ್ಯಾ ದೇಶದ ಒಲಂಪಿಕ್ ಫುಟ್‌ಬಾಲ್ ಟೀಮಿನಲ್ಲಿ, ಮೈಸೂರಿನ ಆಟಗಾರರೂ ಇದಾರೆ....ಒಲಂಪಿಕ್ ಬಹುಮಾನವನ್ನು ಅವರು ಒದ್ದು ವಸೂಲಿ ಮಾಡಿಕೊಂಡು ಬರುತ್ತಾರೆ, ಎಂದು ಅನೇಕರು ನಂಬಿದ್ದಾರೆ.

* * *

ಬಂದೀಖಾನೆಗಳಿಂದ ಲಾಭ ಪಡೆಯಲು ಡಾ|| ರೆಕ್ಲೆಸ್ ಅವರು ಕೆಲವು ಹೊಸ ಸಲಹೆಗಳನ್ನು ತಮ್ಮ ವರದಿಯಲ್ಲಿ ಕೊಟ್ಟಿದಾರೆ.... ಈ ವಿಷಯದಲ್ಲಿ ನಮ್ಮ ನಾಯಕರು ಬೇರೊಬ್ಬರಿಂದಲೂ ಸಲಹೆಗಳನ್ನು ಅಪೇಕ್ಷಿಸುವುದಿಲ್ಲ.

* * *

ರಾಯಲಸೀಮೆಯಲ್ಲಿ, ನೀರಿಲ್ಲದೆ ಕ್ಷಾಮ ತಲೆದೋರಿರುವುದಕ್ಕೂ ಅಲ್ಲಿ ಹೆಚ್ಚು ಆಹಾರ ಬೆಳೆಯಿರಿ ಅಂತ ಕೂಗಿ ಗಂಟಲು ಶೋಷಿಸಿ ನಾಯಕರು ಇದ್ದ ನೀರನ್ನೆಲ್ಲಾ ಕುಡಿದುದಕ್ಕೂ ಸಂಬಂಧವಿಲ್ಲವಂತೆ.

* * *

ನಮ್ಮ ದೊಡ್ಡಾಸ್ಪತ್ರೆಗೆ, ನಿರಾಶ್ರಿತ ರೆಫ್ಯೂಜಿ ಅಡಿಗೆಯವನನ್ನು ನೇಮಿಸಿದ್ದಾರಂತೆ.

—ರೋಗಿಗಳ ಸಂಖ್ಯೆಯನ್ನಿಳಿಸಲು ಇದಲ್ಲದೆ ಬೇರೆ ಮಾರ್ಗವೇ ಇರಲಿಲ್ಲವೇ?

* * *

ನವೀನ ಮಾದರಿಯ ಪ್ಲಾಸ್ಟಿಕ್ ಛತ್ರಿಗಳು ಬಂದಿವೆಯಂತೆ—ಛತ್ರಿ ತೆರೆದಿದ್ದರೂ ಆಸಾಮಿ ಮುಖ ಕಾಣಿಸುತ್ತದೆಯಂತೆ.

—ಏನು ಪ್ರಯೋಜನ! ಇಂತಹ ಛತ್ರಿಗಳಿಂದ.

* * *

ನಮ್ಮಾಕೆ ದಿನಾಲೂ ಮುದ್ದೆ ಅನ್ನ ಮಾಡೋದನ್ನ ನೋಡಿ, ರಾಗಿ ಹಿಟ್ಟು ತಂದು ಹಿಟ್ಟು ಮಾಡೆ ಅಂದಾಗ ಉದುರು ಉದುರಾಗಿ ಹಿಟ್ಟು ಮಾಡಿದಳು, ಏನುಮಾಡಲಿ ಎಂದು ವಾಚಕರೊಬ್ಬರು ಅತ್ತಿದ್ದಾರೆ.

—ಬ್ರೆಡ್ಡು ತಂದು ತಿನ್ನಿರಿ ಎಂದು ಹೇಳೋಣವೇ?

* * *

ಮದ್ರಾಸಿನ ಅಂಚಿನಲ್ಲಿರುವ ಎನ್ನೂರಿನ ಹತ್ತಿರ ಮೂರುತಿಂಗಳಲ್ಲಿ ಮೂರು ಹಗಲು ದರೋಡೆ ನಡೆದವಂತೆ.

—ಒಂದೇಕಡೆ ಮರಕಳಸಿ ಮರಕಳಿಸಿ ದರೋಡೆ ಮಾಡೋದು ದರೋಡೆ ಶಾಸ್ತ್ರಕ್ಕೆ ವಿರುದ್ಧ ಅಂತ ಅನುಭವಸ್ಥರ ಅಭಿಮತ.

* * *

ಇಡ್ಲೀಗೆ ಹಾಕುವ ಹುದುಗನ್ನೂ ಈಗ ವಿಜ್ಞಾನ ರೀತಿಯಾಗಿ ಪ್ರಗತಿಗೊಳಿಸಿರುವುದರಿಂದ ಒಂದು ಇಡ್ಲಿ ಆಗುತ್ತಿದ್ದಲ್ಲಿ ಈಗ ಆರು ಇಡ್ಲಿ ಸಾಧ್ಯವಂತೆ.

—ಅಂದರೆ ಭಾರತದ ಜನಸಂಖ್ಯೆ ಏರುವುದಕ್ಕೆ ಸರಿಯಾದ ಉತ್ತರ ದೊರಕಿದಂತಾಯ್ತು!



# ಜರೂರು ಪತ್ರ

---

ತೀರ್ಥರೂಪು ತಂದೆಯವರ ಚರಣ ಸನ್ನಿಧಿಗಳಲ್ಲಿ,

ಬಿನ್ನಹಗಳು.

ಕೆಳಗಿನ ತಾರೀಕುವರೆಗೆ ನಾನು ಕ್ಷೇಮವಾಗಿದ್ದೇನೆ. ಮನೆಯಲ್ಲಿ ಸಹ ಎಲ್ಲರೂ ಹಾಗೇ ಇರುವರೆಂತ ನಂಬುತ್ತೇನೆ ತರುವಾಯ, ನಮ್ಮ ವರ್ಷಾರ್ಧ ಪರೀಕ್ಷೆ ಹತ್ತಿರ ಹತ್ತಿರ ಬರುತ್ತಾ ಇದೆ. ಮೇಷ್ಟ್ರುಗಳು ಕಾಟಕೊಡಲು ಈಗಾಗಲೇ ಶುರು ಮಾಡಿರುತ್ತಾರೆ ಸಂಜೆ ಸಮಯದಲ್ಲಿ ನಾವು ಆಡಲಿಕ್ಕೆ ಹೋದರೆ, "ಏನೊ, ಇಡೀದಿನ ಆಟದಲ್ಲೆ ಮುಗಿಸಿಬಿಡಿಯಲ್ಲೋ. ಪರೀಕ್ಷೆ ಬಂತೂ ಅಂತ ಗೊತ್ತಿಲ್ವೇನೋ? ನೋಡ್ತೀನಿ ನಾನೂ, ನೀನು ಹ್ಯಾಗೆ ಪ್ಯಾಸಾಗ್ತೀ ಅಂತ?" ಎಂದೂ, ಸಂಜೆ ಲೈಬ್ರರಿಯಲ್ಲಿ ಓದುತ್ತಲೇ ಕುಳಿತು ಬಿಟ್ಟತೂ ಅಂತಂದ್ರೆ, "ಏನೋ, ಇಡೀದಿನ ಓದಿ ಗಿಣಿ ಬಾಯಿಪಾಠ ಮಾಡಿಬಿಟ್ಟರೆ, ಪ್ಯಾಸಾಗುತ್ತೆ ಅಂತ ಗ್ರಹಿಸಿ ಬಿಟ್ಯೇನೋ" ಅಂತಲೂ ಕಂಡಾಬಟ್ಟೆ ಕಾಲ, ಕೆದರಿ ಜಗಳ ತೆಗೆಯೋಕ್ಕೆ ಶುರು ಹಚ್ಚಿದ್ದಾರೆ. ನನ್ನನ್ನು ನೋಡಿದ ತಕ್ಷಣ ಕಣ್ಣು ಕೆಂಪಗೆಮಾಡಿ, ಮೀಸೆ ಹುರಿಕಾಯಿಸಿ, ಮೂಗಿನ ಸೊಳ್ಳೆಗಳೆರಡನ್ನೂ ಅಗಲಿಸಿ, ಕೆಕ್ಕರಿಸಿ, ಕೆಟ್ಟ ದೃಷ್ಟಿಯಿಂದ ನೋಡ ತೊಡಗಿದ್ದಾರೆ. ಆದ್ದರಿಂದ ಇನ್ನು ಟ್ಯೂಶನ್ ತೆಕ್ಕೊಳ್ಳದೆ ನಿರ್ವಾಹವಿಲ್ಲ. ದಯವಿಟ್ಟು ಇದಕೆ ನೀವು ಒಪ್ಪಿದೀರ ಅಂತ ನಾನು ತಿಳಿದುಕೊಳ್ಳೋದಕ್ಕೋಸ್ಕರ ರೂಪಾಯಿ 25 ನ್ನು ಕೂಡಲೇ ಮಣಿಯಾರ್ಡರ್ ಮಾಡಬೇಕಾಗಿ ಬೇಡಿಕೊಳ್ಳುತ್ತೇನೆ—

ಮೈಸೂರು
28-2-52

ಇತಿ ಬೇಡುವ ಬಿನ್ನಹಗಳು,
ಎಂ. ಬಿ. ಮರಗಿಣಿ.

—— o ——




ಲೇಖಕನ ದೂರಾಲೋಚನ!

# "ಲವಕೃಶರು"

— ೧ —

ಕೊಟ್ಟಿಲಲಿ ಒಟ್ಟಾಗಿ ತುಂಟು ನಗೆ ತೋರುತಲಿ
ನಾವವಳಿಜವಳಿ ಮಲಗಿರಲು—
ದಿಟ್ಟಿಸಿದರಾಮಂದಿ ಲಟ್ಟಿಗೆಯ ಮುರಿದರು
ಬಲು ಚಲುವರಿವರೀರ್ವರೆಂದು
ಥಟ್ಟನೆ ಹೋಲಿಸಿದಳೋರ್ವ ಮುದಿ ಮುತ್ತೈದೆ ಅಂದು
"ಲವಕುಶರೆ ಸರಿ ಇವರು" ಎಂದು
ಕೆಟ್ಟ ಮೂತಿಯು ಸುಟ್ಟ ಸುಬ್ಬಿ ಗೊಣಗಿದಳು
ಲವಕುಶರಲ್ಲ "ಕೃಶ"ರು ನಿಜ ಎಂದು.

— ೨ —

ಹಟ್ಟಿಯು ಹೈದರ ಜುಟ್ಟೆಳೆದು ಕುಟ್ಟುವೆವು ನಾವು
ಬಾಲರು ಚಿಟ್ಟನೆ ಚೀರಿ ಓಡುವರು.
ಸಿಟ್ಟಿನಿಂದಲಿ ಬಂದ ಆ ಹೈದರ ಹಡೆದಮ್ಮ ತಂದೆಗಳು,
ಚಾಡಿ ಬೊಗಳುವರು ಎಮ್ಮಮ್ಮ ತಂದೆಗಳಲಿ
ಅಟ್ಟಹಾಸದಿ ಹಿಗ್ಗುವಳು ಎಮ್ಮಮ್ಮ ಗೋಪಮ್ಮ
ನಮ್ಮ ತುಂಟುತನ ಕಂಡು "ಬಲರಾಮ ಕೃಷ್ಣ"ರೆಂದು
ಬೊಟ್ಟು ಮಾಡುವಳು ಕಿಟ್ಟಮ್ಮ ಎಮ್ಮೆಡೆಗೆ
ರಾಮಕೃಷ್ಣರಲ್ಲ "ಬಾಲದಯ್ಯ"ರು ನಿಜ.

— ೩ —

ಜುಟ್ಟು ಎಳೆದೆನು ಅವನ—ಕಟ್ಟಿದೆನು ಕಂಬಕ್ಕೆ
ಕೊಟ್ಟು ತೊಲಗಲಿ ಎನ್ನ 'ಪಾಲು' ಎಂದು
ಬಿಟ್ಟನೇ ಆ ಅನುಜ ಹರಿದನೆನ ಜನಿವಾರ—ಪರಟು ಕೋಟು.
ಬಿಟ್ಟು ಹೊರಡಲಿ ಎನ್ನ ಮನೆಯಿಂದ ಎಂದು.
ಚಟ್ಟ ಏರುವ ಕೆಟ್ಟ ಖಾಯಿಲೆ ಬರಬಾರದೇ ನಿನಗೆ ಎಂದು
ಹಾರೈಸಿದಳು ಕೈಹಿಡಿದಾಕೆ, ಅತ್ತಿಗೆಮ್ಮಗೆ ಅಂದು.
ಹಟ್ಟಿಯ ಮಂದಿ ನಕ್ಕರು ಹೊಟ್ಟೆ ಬಿರಿಯ, ಅಂದರು
ಏನು ಅನುಜರೈ "ವಾಲಿಸುಗ್ರೀವ"ರೆಂದು

—ಯಜ್ಞಪಶು.

# ತಾಳ್ಮೆಯ ತತ್ವ

ರೈಲು ಬರುವುದು ನಲವತ್ತು ನಿಮಿಷ ತಡ. ಅದೇ ರೈಲಲ್ಲೇ ಮಾವನವರ ತಮ್ಮ ಬರುವುದು ದಂಪತಿ ಸಮೇತ. ನನ್ನನ್ನು ಓದಿಸಿ, ಕೆಲಸಕೊಡಿಸಿ ಕಾಪಾಡಿದ್ದೇ ಮಾವ ಅಂದ ಮೇಲೆ, ಇನ್ನೇನು ಮಾಡುವುದು? ಸ್ಟೇಷನ್ ಹೋಟಲಿಗೆ ನುಗ್ಗದೆ ವಿಧಿಇಲ್ಲ. ಅಲ್ಲೋ? ಕೂಡುವುದಕ್ಕೆ ತಾವಿಲ್ಲ. ಹುಡುಕಿದೆ, ಹುಡುಕಿದೆ, ಮೂಲೆ ಮೂಲೆಯಲ್ಲೂ ತುತ್ತತುದಿ ಮೇಜೆಯಲ್ಲಿ ಒಂದು ಕುರ್ಚಿ ಖಾಲಿ. ಇನ್ನೆರಡು ಕುರ್ಚಿಗಳಲ್ಲಿ ಒಬ್ಬ ಬಟ್ಟತಲೆ ಸೂಟಿನವ, ಒಬ್ಬ ಬಿಳೀಕೋಟ್ ಧೋತ್ರದವ. ಇಬ್ಬರು ಮಧ್ಯವಯಸ್ಸಿನವರು, ಕೂತು ಮಾತಾಡುತ್ತಿದ್ದರು.

ಧೋತ್ರದವನದೇ ಮಾತು ಜೋರು. ಸೂಟಿನವ ಮಂಕು ಬಡಿದವನಂತೆ ಮಸಾಲೆ ಮೆಲ್ಲುತ್ತಿದ್ದ. "ಸೋಮವಾರ ಮಳೆ, ಮಂಗಳವಾರವೂ ವಿಪರೀತ. ಬುಧವಾರ, ನಾನು ಅವಳಿಗೆ ಹೇಳಿದೆ, ಲೇ! ನಾನು ಅವಳನ್ನ ಲೇ ಅಂತಲೇ ಕರಿಯೋದು, ಲೇ, ಇವತ್ತು ಮಧ್ಯಾಹ್ನ ಊಟದ ಹೊತ್ತಿಗೆ ಮಳೆನಿಂತು ಹೋಗುತ್ತೆ, ನೋಡುತ್ತಿರು, ಅಂದೆ " ಆಗ, ಸೂಟಿನವರು, " ನಿಂತಿತೇನು? ಅಂದರು.

ನಾನೇ ಆ ಸೂಟಿನವರಾಗಿದ್ದಿದ್ದರೆ, ನಿಂತಿತೇನು? ಎಂದು ಹೇಳುವಾಗ, ನನ್ನ ಧ್ವನಿಯಲ್ಲಿ ಬೇಸರ ಜುಗುಪ್ಸೆ ಅಸಮಾಧಾನ ಕೋಪ ದ್ವೇಷ ವೈರಾಗ್ಯ ಎಲ್ಲವನ್ನೂ ಬೆರಸಿ, ಮರ್ಯಾದೆ ಸಭ್ಯತೆ ವಿನಯಗಳನ್ನೂ ಕೊಂಚ ಸೇರಿಸಿ, ಸಾಕು ನಿನ್ನ ಪುರಾಣ, ಅಂತ ನಯವಾಗಿ ಹೇಳುತ್ತಿದ್ದೆ. ನನ್ನ ಮಾತು ಅತನಿಗೆ ಮುಳ್ಳಿನಂತೆ ತೋರಿ, ಅತ ಎದ್ದು ಹೊರಟು ಬಿಡಬೇಕು, ಹಾಗೆ ಮಾಡುತ್ತಿದ್ದೆ. ಆದರೆ, ಅವರೊಂದು ಸಾಧುಪ್ರಾಣಿ. ತಮಗಾಗುತ್ತಿದ್ದ ಸಂಕಟವನ್ನು ಬಡಿಗೊತ್ತಿ, ಪಾಲಿಗೆ ಬಂದಿದ್ದೇ ಪರಮಾನ್ನ ಅಂತ ಕಿವಿ ಯಾಡಿಸುತ್ತ ಕೂತಿದ್ದರು. ನಿಂತಿತೇನು, ಎಂದು ಅವರು ಕೇಳಿದಾಗ, ಅಜ್ಜಿ ಮಡಿಲಲ್ಲಿ ಕೂತು ರಾಕ್ಷಸನ ಕಥೆ ಕೇಳುತ್ತಿದ್ದ ಮಗುವಿನ ಕಣ್ಣುಗಳು ಅರಳುವ ಹಾಗೆ ಅವರ ಕಣ್ಣುಗಳು ಅರಳಿದುವು.

"ನಿಂತಿತು! ಆದರೆ, ಅವತ್ತಲ್ಲ, ಅದರ ಮಾರನೆಯ ದಿನವೂ ಅಲ್ಲ; ಭಾನುವಾರ ನಿಂತಿತು, ಸಂಜೆ ಸರಿ, ಗಾಡಿಕಟ್ಟಿಕೊಂಡು ಹೊರಡೋಣ ಸಾಗರಕ್ಕೆ ಅಂತ ನಿಂಗನನ್ನು ಕರಿದೆ ... ಸಾಗರ ಅಂದ್ರೆ, ಅದೇ ಸಮುದ್ರವಲ್ಲ, ಊರು, ನಮ್ಮೂರಿಂದ ಎಂಟು ಮೈಲಿ ಸಾಗರಕ್ಕೆ ... ನಿಂಗ ನಮ್ಮ ಮನೆ ಆಳು, ಒಬ್ಬ ಆಳು.... ಎಂಟು ಹತ್ತು ಜನ ಇದಾರೆ . ಯಾಕಿಷ್ಟೊಂದು ಜನ, ಅಂತ ನಾನು. ಇರುವುದು ನಾವಿಬ್ಬರುತಾನೆ ... ಎಲ್ಲಾದರೂ ಹೋಗಿ ಗದ್ದೆಗಿದ್ದೆ ಮಾಡಲಿ....

ಹೆಚ್ಚು ಆಹಾರ ಬೆಳೆಯಲಿ ...ಮನೆಯಲ್ಲಿ ಯಾಕೆ ಅನ್ನಕಂಟಕ ಅಂತ ನಾನು ಅವಳದಕ್ಕೆ ಒಪ್ಪುವುದಿಲ್ಲ ...ದೊಡ್ಡ ಮನೆತನ ...ಕಾಕಂಬಳ್ಳಿ ಅಂತ ಕೇಳಿರ ಬಹುದು ನೀವು... ತರೀಕೆರೆ ಪಾಳೇಗಾರರ ಕಾಲದಲ್ಲಿ ದಿವಾನರಾಗಿದ್ದರು.... ತರೀಕೆರೆ ಬಂಡಾಯವಾಯಿತಲ್ಲ....ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಭೂಪ ಅಂದರೆ ಅವರು .. ಮನೆಯಲ್ಲಿ, ದೀಪ ಗಾದೆ ಕೇಳಿಲ್ಲವೆ ನೀವು ....... ಈಗೇನು? ನಮ್ಮ ಪಕ್ಕದ ಹಳ್ಳಿಗೂ ದೀಪ ಬಂದುಬಿಟ್ಟದೆ....ಜೋಗದ್ದು.... ಮಹಾತ್ಮಾ ಗಾಂಧಿ ಪವರ್ ಅಂತಲ್ಲಾ ಅದು...."

ಸೂಟಿನವರು ಕಿವಿಯಾಡಿಸುತ್ತಲೇ ಇದ್ದರು ...ಆಕಳಿಸಲೇ ಇಲ್ಲ ಕಣ್ಣೆವೆ ಕೆಳಗೆ ಬರಲೇ ಇಲ್ಲ....ಮುಖದಲ್ಲಿನ ಮಂದಹಾಸ ಮಂದವಾಗಲೇ ಇಲ್ಲ? 'ಆಮೇಲೆ....?' 'ಅಲ್ಲಿಂದ ...?' 'ಅವನೇನಂದ' 'ಅಯ್ಯೋ! ರಾಮ!' ಎಂದು ಆಗಾಗ ಉದ್ಗಾರ ತೆಗೆದು, ಧೋತ್ರದವರನ್ನು ಹುರುಪುಗೊಳಿಸುತ್ತಾ, ಅವರು ಆತ ಹೇಳುತ್ತಿದ್ದ ಕಗ್ಗದ ಕಂತೆಯನ್ನೆಲ್ಲ ಕರ್ಣ ರಸಾಯನದಂತೆ ಈಂಟುತ್ತಿ ದ್ದರು. ಯುದ್ಧಾನಂತರದ ಜಗತ್ತಿನಲ್ಲಿ, ಸ್ವಾತಂತ್ರ್ಯ ಸಾಧನಾನಂತರದ ಭಾರತದಲ್ಲಿ, ಇಂಥ ಕಷ್ಟಸಹಿಷ್ಣುಗಳು,— ಓಡಿ ತಪ್ಪಿಸಿಕೊಳ್ಳಲು ದಾರಿ ಇದ್ದರೂ, ಕರ್ತವ್ಯ ಪರಿಪಾಲನೆಗಾಗಿ ಓಡಿ ಹೋಗದೆ ಇರುವವರು,—ಇದಾ ರಲ್ಲಾ, ಎಂದು ನಾನು ಹಿಗ್ಗಿದೆ.

ಆಗ, ಧೋತ್ರದವರು ಹೋಟೆಲ್ ಗಡಿಯಾರದ ಕಡೆ ದೃಷ್ಟಿ ಬೀರಿ, ಥಟಕ್ಕನೆ ಎದ್ದರು. "ಛೆ! ಛೆ! ಹೊತ್ತುಹೋದದ್ದೇ ಗೊತ್ತಾಗಲಿಲ್ಲ"ಎಂದರು. ಸೂಟಿನವರು ಅವರನ್ನು ಹಿಡಿದುನಿಲ್ಲಿಸಲು ಪ್ರಯತ್ನಿಸಿ, ವಿಫಲರಾದರು 'ನಾನು ಹೇಳಿದ ವಿಷಯ....'ಎಂದು ಮಾತ್ರ ಅವರು ಧೋತ್ರದವರಿಗೆ ಕೊಂಚ ಗಟ್ಟಿ ಯಾಗಿ ಹೇಳಿದರು. ಆದರೆ, ಅಷ್ಟರೊಳಗೆ ಅವರು ಪ್ಲಾಟ್‌ಫಾರಂಗೆ ಧಾವಿಸಿ ಕಣ್ಮರೆಯಾಗಿಬಿಟ್ಟಿದ್ದರು.

ಆಗಲೇ ಅಂತ ಕಾಣುತ್ತೆ, ಅವರು ನಾನಲ್ಲಿರುವುದನ್ನು ಪತ್ತೆಮಾಡಿದ್ದು. ಅದುವರೆಗೂ ಅವರು ಪಾಪ, ಆ ಹಿಂಸೋಪಾಖ್ಯಾನವನ್ನೇ ಕೇಳುತ್ತ ನರಳು ತ್ತಿದ್ದರು. ಆದರೂ, ಅವರು ನನ್ನ ಕಡೆ ನೋಡಿದಾಗ ಧೋತ್ರದವರನ್ನು ನೋಡುತ್ತಿದ್ದಾಗಿನ ಸಹಜ ಮಂದಹಾಸವೇ ಅಚ್ಚಳಿಯದೆ ಉಳಿದಿತ್ತು. ಎಂಥ ತಾಳ್ಮೆ, ಎಂಥ ದೊಡ್ಡತನ, ಎಂಥ ಸಹನೆ,—ಎಂದು ಮೆಚ್ಚಿದೆ. ಅವರು ಮಾತು ತೆಗೆದರು ದನಿ ಇಂಪಾಗಿತ್ತು. ಆದರೆ, ವಿಷಯ...?

"ತಾವು ನನ್ನ ಕಂಪನಿಯಲ್ಲಿ ಒಂದು ಸಾವಿರ ರೂಪಾಯಿಯದು....ಇನ್ ಷೂರೆನ್ಸ್ ಮಾಡಬೇಕಲ್ಲ"

—ರೇವಣ್ಣ.






“ ಅಜ್ಜನ ಪ್ರಾಣಸಂಕಟ, ಮೊಮ್ಮಗನ ಚೆಲ್ಲಾಟ ”

# ಎಂಥ ಬದುಕು

— o —

ನೂರು ರನ್ನು ನೂರು ಬಾರಿ ಬೀರಿ ಮಂಕಡೆನಿಸಲಿಲ್ಲ ;
ಕಾರು ನಡಸಿ ಒಬ್ಬ ಪಾದಚಾರಿಯಸುವ ತೆಗೆಯಲಿಲ್ಲ;
ಹಾರುವಾ ವಿಮಾನದಿಂದ ಧುಮುಕಿ ಮೂಳೆ ಮುರಿಸಲಿಲ್ಲ;
ಏರಿ ಬರುವ ಸಾಲದಿಂದ ನೇಣನೊಮ್ಮೆ ಬಿಗಿಯಲಿಲ್ಲ—
ಬದುಕಿದೇನು ಸಾರ್ಥಕ?
ಇದ್ದುದೇ ನಿರರ್ಥಕ!

ಏಳು ತಂತಿ ಮೀಟಿ ನಾನು ಚೌಡಯ್ಯ ನೆನಿಸಲಿಲ್ಲ;
ಹಾಳು ಮೂಳು ತಿಂದು ಸರ್ವ ಭಕ್ಷ ಕೀರ್ತಿ ಗಳಿಸಲಿಲ್ಲ;
ಆಲಿ ಖಾನನಂತೆ ಕೆಂಪು ಸಿನಿಮ ತಾರೆ ವರಿಸಲಿಲ್ಲ;
ಪೋಲಿ ಯೆನಿಸಿ ಜನರು ನನ್ನ ಗೇಲಿಕೂಡ ಮಾಡಲಿಲ್ಲ—
ಬದುಕಿದೇನು ಸಾರ್ಥಕ?
ಇದ್ದುದೇ ನಿರರ್ಥಕ!

ನನ್ನ ಭಾವ ಚಿತ್ರವನ್ನು ಮಂತ್ರಿ ಯೊಬ್ಬ ತೆರೆಯಲಿಲ್ಲ;
ಸಣ್ಣ ವಯಸಿ ಕಲಿತ ವೀಪಿಂಗಿನ್ನು ನಾನು ಮರೆಯಲಿಲ್ಲ;
ಅನ್ನ ಮಾರಿ ಮುಹಡಿ ಕಟ್ಟಿ ಮಡದಿ ಗೊಡವೆ ಹೇರಲಿಲ್ಲ;
ಚಿನ್ನ ವೆಂದು ಸತಿಯು ಜೊತೆಗೆ ಅವಳ ನಿವಳ ನೊಲಿಯಲಿಲ್ಲ—
ಬದುಕಿದೇನು ಸಾರ್ಥಕ?
ಇದ್ದುದೇ ನಿರರ್ಥಕ!

ಖ್ಯಾತಿಗೊಂಡ ರೋಗದಿಂದ ಬಾಧೆಪಟ್ಟು ನರಳಲಿಲ್ಲ;
ಛಾತಿವಂತ ನೆನಿಸೆ, ಇನ್ನು ಗೌರಿಶಂಕ ರೇರಲಿಲ್ಲ;
ಮಾತುಗಾರ ನೆನಿಸಿ ಮೋಸ ಮಂಕುಬೂದಿ ಎರಚಲಿಲ್ಲ;
ಸೋತು ಸೋತು ಡಿಗ್ರಿಗಳಿಸೆ ದಶವರುಷ ಗಳೆಣಿಸಲಿಲ್ಲ—
ಬದುಕಿದೇನು ಸಾರ್ಥಕ?
ಇದ್ದುದೇ ನಿರರ್ಥಕ!

— ಪಾಟೀಳ.

# ಆಯುಸ್ಕರ್ಮ

ಚಿರಂಜೀವಿತ್ವಕ್ಕೆ ಮುಖ್ಯಸಾಧನೆಗಳು, ಎಂದು ಅನೇಕ ಪೂರ್ಣಾಯುಷ್ಮಂತರು ಹೇಳಿರುವ ಹೇಳುತ್ತಿರುವ, ಅನೇಕವನ್ನು ನಾನು ಮೊದಲಿಂದಲೂ ಆಚರಿಸುತ್ತಾ ಬಂದಿದೇನೆ. ಹುಟ್ಟಿದಂದಿನಿಂದ ಎರಡು ಮೂರು ವರುಷಗಳ ವರೆಗೂ ಬೀಡಿ ಚುಟ್ಟಾವಗೈರೆ ಯಾವದೂ ಸೇದಲಿಲ್ಲ; ಉಪ್ಪು ಹುಳಿ ಖಾರ ಈರುಳ್ಳಿ ಗಸಗಸೆ ಯಾವುದನ್ನೂ ತಿನ್ನಲಿಲ್ಲ. ನೀರಾವನ್ನೂ ಕೂಡ ಕುಡಿದ ಜ್ಞಾಪಕವಿಲ್ಲ. ಸೂರ್ಯೋದಯಕ್ಕೆ ಮುಂಚೆಯೇ ಎದ್ದು ಉದಯರಾಗ ಹೇಳುತ್ತಿದ್ದೆ. ತೊಟ್ಟಿಲಿಂದ ಇಳಿದು ಹೊಸಲು ದಾಟಿ ಓಡಾಡುವುದಕ್ಕೆ ಪ್ರಾರಂಭ ಮಾಡಿದಾಗಿನಿಂದ, ನನ್ನ ತಂದೆ ಸೇದಿ ಬಿಸಾಕಿದ ಸಿಗರೇಟು ಚೂರುಗಳನ್ನಲ್ಲದೆ, ಧೂಮಪಾನಕ್ಕಾಗಿ ಹೆಚ್ಚುವೆಚ್ಚದಲ್ಲಿ ಕಡ್ಡಿ ಉಪಯೋಗಿಸಿಲ್ಲ. ಆಕಸ್ಮಾತ್ತಾಗಿ ಕೆರೆಗೆ ಬಿದ್ದಾಗಲೆಲ್ಲ, ತಣ್ಣೀರು ಸ್ನಾನವನ್ನೇ ಮಾಡುತ್ತಿದ್ದೆ. ಶಾಲೆಸೇರಿದ ಮೇಲೆ, ಪ್ರತಿ ಒಬ್ಬ ಗುರುವಿಗೂ ದಿನವೂ ನನ್ನ ಸಹಸ್ರನಾಮ, ಅಷ್ಟೋತ್ತರಗಳು ಸಲ್ಲುತ್ತಿದ್ದುವು. ಶಾಲೆಗೆ ಹೋಗುವಾಗ ನಿಧಾನವಾಗಿಯೂ, ಅಲ್ಲಿಂದ ಬರುವಾಗ ಅತಿವೇಗವಾಗಿಯೂ ನಡೆಯುತ್ತಿದ್ದೆ.

ವ್ಯಾಯಾಮ ಎಂದು ಹೇಳಿ, ಈಚೆಗೆ ಶಾಲಾ ಬಾಲಕರಿಗೆ ಡ್ರಿಲ್ ವಗೈರೆ ಒತ್ತಾಯವಾಗಿ ಹೇಳಿ ಕೊಡುತ್ತಿದ್ದಾರೆ. ಆದರೆ, ನನಗೆ ಅದೊಂದೂ ಬೇಕಾಗಿರಲಿಲ್ಲ; ಸಾಕಾಗುತ್ತಲೂ ಇರಲಿಲ್ಲ. ನನ್ನ ಸಹಪಾಟಿಗಳಿಂದ ನಾನು ಹಣ, ಮಿಠಾಯಿ, ಪೆನಿಸೀಲು, ಇತ್ಯಾದಿಯನ್ನು ಕಸಿದುಕೊಳ್ಳಲು ಯತ್ನಿಸಿದಾಗ, ದಿನವೂ ಆಗುತ್ತಿದ್ದ ಕೈ ಕೈ ಮಿಲಾವಣೆಯೇ ನನಗೆ ಸಾಕಷ್ಟು ವ್ಯಾಯಾಮವನ್ನು ಕೊಡುತ್ತಿತ್ತು. ನನ್ನ ಬುದ್ಧಿಯ ಬೆಳವಣಿಗೆಕೂಡ ತರಗತಿಯ ಗೋಡೆಗಳ ಆಚೆಯೇ ರೂಪುಗೊಂಡಿದ್ದು. ಮೂಗರ್ಜಿ ಬರೆದು ಬಚಾವಾಗುವುದಕ್ಕೆ ರುಜುಗಳನ್ನು ರೇಖಿಸುವುದಕ್ಕೆ, ಕನ್ನಡ ಪಂಡಿತರನ್ನು ಕೀಟಲೆ ಮಾಡುವುದಕ್ಕೆ ಗೋಡೆಗಳಲ್ಲಿ ಚಿತ್ರ ಬರೆಯುವುದಕ್ಕೆ, ಪ್ರಾಸಬದ್ಧವಾದ ಪಂಕ್ತಿ ರಚಿಸುವುದಕ್ಕೆ ಸಾಮಾನ್ಯರ ಬುದ್ಧಿ ಸಾಕೆ? ನಮ್ಮ ಶಾಲೆಗೆ ಅನೇಕ ಹುಡುಗರು ತಮ್ಮ ತಮ್ಮ ಮನೆಗಳಿಂದ ತರುತ್ತಿದ್ದ ಟಿಫಿನ್ ಬಾಕ್ಸುಗಳೆಲ್ಲ ತೆರೆದು ಆರಿಸಿ ಮೂಸಿ ಸೋಸಿ ಸೇವಿಸಿದರೆ, ಆರೋಗ್ಯಕ್ಕೆ ಬಹಳ ಒಳ್ಳೇದೆಂದು ನಾನು ಪತ್ತೆಮಾಡಿದೆ. ಆಹಾರ ವೈವಿಧ್ಯತೆಯೇ ದೀರ್ಘಾಯುಸ್ಸಿಗೆ ಪ್ರಥಮ ಸೋಪಾನ ವಲ್ಲವೆ?

ಚಿಂತೆಯೋ ಆಯುಸ್ಸಿನ ಕೊಡಲಿ ಎಂದು ನೀವೂ ಕೇಳಿರಬಹುದು. ಆದರೆ, ೨೨ನೆಯ ವರ್ಷದಲ್ಲೇ ನನ್ನ ಚಿಂತೆಗಳನ್ನೆಲ್ಲ ಹೊತ್ತು ಬಗೆಹರಿಸುವ ಒಂದು ವಸ್ತು ನನಗೆ ದೊರೆಯಿತು. ಅಂದರೆ, ನನಗೊಬ್ಬ ಮಾವ ಸಿಕ್ಕಿದ. ನೂರು ವರುಷ ಸುಖವಾಗಿ ಬಾಳು, ಎಂದು ನನ್ನನ್ನು, ನನ್ನ ಮದುವೆಯ ದಿನ ಆ ಮಾವನೇ ಆಶೀರ್ವಾದ ಮಾಡಿದ. ಅಷ್ಟುವರ್ಷ ನನ್ನನ್ನು ಬಾಳಿಸುವುದಕ್ಕೆ ಬೇಕಾದ ಹಾಲು ಮೊಸರು ತುಪ್ಪ ಇತ್ಯಾದಿ ಎಲ್ಲವನ್ನೂ ಒದಗಿಸಿದ.

ಆದರೆ, ಮಾವ ತೀರಿಕೊಂಡ, ನನ್ನ ೨೮ರಲ್ಲಿ. ಅಷ್ಟು ಹೊತ್ತಿಗೆ ಸರಿಯಾಗಿ, ಸರ್ಕಾರವೇ ನನ್ನ ಮಾವನಾಗಲು ಒಪ್ಪಿತು. ನನ್ನನ್ನು ಕರೆದು, ಅದರ ಒಂದು ಉಪಚಾರ ಸಂಸ್ಥೆಗೆ ಸೇರಿಸಿತು. ಅಲ್ಲಿ ಟೈಂಪ್ರಕಾರ ಊಟ ಸ್ನಾನ ವ್ಯಾಯಾಮ, ತೂಕ ಮಾಡಿದ ತರ್ಕಾರಿ, ಅನ್ನ, ಗಂಟೆ ಪ್ರಕಾರ ನಿದ್ದೆ ನಡಿಗೆ, ಸರಳ ಜೀವನ, ಉದಾತ್ತ ಭಾವನಾ .. ಹೆಂಡತಿ ಮಕ್ಕಳ ಚಿಂತೆಕೂಡ ನನ್ನ ಮನಸ್ಸಿಗೆ ಹತ್ತದಂತೆ ಅವರಿಂದ ಬಂದ ಪತ್ರಗಳನ್ನೂ ಅವರು ನನಗೆ ತೋರಿಸದೆ ಕಾಪಾಡಿದರು.

ಇಂಥ ಪರೋಪಕಾರಿಗಳಿಗೂ ಹಣದ ಮುಗ್ಗಟ್ಟು ಬರಬೇಕೆ? ಆ ನೆಪದಿಂದಲೇ ಇರಬೇಕು. ಅವರು ನನ್ನನ್ನು ಹೊರಕ್ಕಟ್ಟಿದರು. ಆದರೂ, ನಾನು ಅನೇಕ ಉಪಾಯಗಳನ್ನು ಹೂಡಿ, ಪಿತೂರಿಗಳನ್ನು ನಡೆಸಿ, ಮತ್ತೆ ಅಲ್ಲಿಗೆ ಹೋದೆ. ಹಿಂದೆ ಆರುವರ್ಷ ಇರಿಸಿಕೊಂಡವರು, ಆಗ, ಎರಡೇ ವರ್ಷ ಸಾಧ್ಯ ಎಂದರು. ನಡೆದಷ್ಟು ದಿನ ನಡೆಯಲಿ, ಅಂತ ನಾನೂ ಎದುರು ಮಾತಾಡಲಿಲ್ಲ. ಮೊನ್ನೆ, ೩೬ ಆಯಿತು. ಇನ್ನು ಅಲ್ಲಿಗೆ ನಾನು ಸುಲಭವಾಗಿ ಹೋಗುವ ಹಾಗಿಲ್ಲ. ಏಕೆಂದರೆ, ನನ್ನ ತಲೆಗೆ ಹೊಳೆಯುತ್ತಿರುವ ಉಪಾಯಗಳೊಂದಕ್ಕೂ ಆ ಬಹುಮಾನ ದೊರೆಯುವುದಿಲ್ಲವಂತೆ, ಲಾಯರು ಹೇಳಿದರು. ದೇಶದ ಜನರೆಲ್ಲ ನನ್ನಷ್ಟೇ ನೀತಿವಂತರಾಗಿರುವುದರಿಂದ, ನಾನು ಏನು ಮಾಡಿದರೂ ಉಚಿತಾತಿಥ್ಯದ ಬಹುಮಾನ ಲಾಭ ನನಗೆ ದೊರೆಯುವುದಿಲ್ಲವಂತೆ

೩೬ ವರ್ಷಕ್ಕಿಂತ ಹೆಚ್ಚುಕಾಲ ಬದುಕಿರುವ ಯಾರಾದರೂ ಪುಣ್ಯಾತ್ಮರು, ಈ ಕಷ್ಟಕಾಲದಲ್ಲಿ, ಇಂಥ ದುಷ್ಟ ವಾತಾವರಣದಲ್ಲಿ, ತಾವು ಹೇಗೆ ಬದುಕಿರುವರು; ಎಂಬುದನ್ನು ನನಗೆ ಸೂಚಿಸಿ ಉಪಕಾರ ಮಾಡಬೇಕಾಗಿ ವಿನಂತಿ.

— ವೆಂಕಟರಾಜು

---

# ಅಕ್ಕಿಮೇಲೆ ಪ್ರೀತಿ



ಅಕ್ಕಿ ಮೇಲಿನ ಪ್ರೀತಿ ಕಡಮೆಯಾಗಬೇಕು, ಆ ಧಾನ್ಯದ ನಂಟ ಗೋಧಿ ಮೇಲಿನ ಇಷ್ಟ ಹೆಚ್ಚಬೇಕು, ಎಂಬ ಚಳುವಳಿಯನ್ನು ಆಹಾರ ಮಂತ್ರಿಗಳು ಪ್ರಾರಂಭಿಸಿದಾರೆ, ಅಕ್ಕಿಯ ಉತ್ಪತ್ತಿಯೂ ಆಮದೂ ಕಡಿಮೆ ಬಿದ್ದಿವೆ; ಗೋಧಿ ಜೋಳ ಇತ್ಯಾದಿಯ ಕಡೆ ಜನರ ನಾಲಗೆ ಹೊರಳಿದರೆ, ಆಹಾರದ ಪೂರೈಕೆಗೆ ತ್ರಾಸ ತಗಲುವುದಿಲ್ಲವೆನ್ನುತ್ತಾರೆ.

ಗೋಧಿಯನ್ನೇ ದಕ್ಷಿಣದೇಶದ ಜನರು ಬಯಸಬೇಕಾದರೆ, ಕೆಲವು ಮುಖ್ಯ ಸಲಹೆಗಳನ್ನು ಅನುಸರಿಸಬೇಕಾಗುತ್ತದೆ.

(೧) ಬಡ ಬೋರೇಗೌಡ, ಬಡರೈತ, ಬಡಮೇಷ್ಟ್ರು—ಎಂದು ಹೇಳಿ ಹೀಯಾಳಿಸುವ ಬದಲು, ಅಕ್ಕಿ ಮೇಷ್ಟ್ರು ಅಕ್ಕಿ ರೈತ, ಅಕ್ಕಿ ಅಳಿಯ, ಅಕ್ಕಿಕವಿ, ಅಕ್ಕಿಬಾಕ್ಕಿದಾರ, ಎಂದೆಲ್ಲ ಹೀಯಾಳಿಸಬೇಕು. ಅಕ್ಕಿ ತಿಂಬುವವನಿಗೆ ಸಮಾಜ ದಲ್ಲೂ ಸಾಹಿತ್ಯದಲ್ಲೂ ಸ್ಥಾನವಿಲ್ಲವೆಂದು ಈ ಪದಜೋಡಣೆಯಿಂದ ಜನ ತಿಳಿದುಕೊಂಡು, ಗೋಧಿಕಡೆ ತಿರುಗುತ್ತಾರೆ. ಬಡವಂಗೆ ಮಾತ್ರ ಅಕ್ಕಿ ಕೊಡ ಲಾಗುತ್ತದೆ ಎನ್ನಿ. ನಾಳೆಯಿಂದ; ಬಡವರೂ ಕೂಡ ಅಕ್ಕಿಯನ್ನು ತ್ಯಾಗ ಮಾಡುತ್ತಾರೆ

(೨) ಸಂನ್ಯಾಸಿಗಳೆಲ್ಲ ಗೋಧಿ ಚಪಾತಿಗಳನ್ನೇ ಹೊಡೀತಾರೆ, ಗುರುಗಳೆ ಲ್ಲರೂ ಗೋಧಿಯಿಂದ ತಯಾರಿಸಿದ ಪೂರಿಗಳನ್ನೇ ತೆಗೆದುಕೊಳ್ಳುತ್ತಾರೆ, ಎಂದು ಪ್ರಚಾರ ಮಾಡಿದರೆ ಶಿಷ್ಯಕೋಟಿಗಳೂ ಅದನ್ನೇ ಬಳಸುತ್ತಾರೆ. ಆಟಗಾರ ರನ್ನು ಟೀಕಿಸುವಾಗ, "ಅಕ್ಕಿ ದೋಸೆ ಅಯ್ಯಾಸಾಮಿ ಆರು ರನ್‌ಗೆ ಔಟು" "ಗೋಧಿ ಪೈಲ್ವಾನ್ ಗೋಪಾಲನ್ ಗೋಲು ಹೊಡೆದದ್ದೊ ಹೊಡೆದದ್ದೇ" "ಟೆನ್ನಿಸ್‌ವೀರ ಸುಬ್ಬಾರಾಯರಿಗೆ ಇನ್ನೇನಿಲ್ಲ ಅಂದರೂ ಗೋಧಿ ಗಂಜಿಯೇ ಸಾಕಂತೆ" ಎಂದೆಲ್ಲ ಶಿರೋನಾಮೆ ಹಾಕಿದರೆ, ಕಾಲೇಜು ವಿದ್ಯಾರ್ಥಿಗಳೂ ಆಯಾ ಆಟದ ಬೀಸಣಿಗೆಗಳೂ ಅಕ್ಕಿಯನ್ನು ತೊರೆದು ಗೋಧಿಯೇ ಬೇಕೆನ್ನು ತ್ತಾರೆ. "ಚೆಂಪೆ ಭಾಗವತರ ರವೆ, ಅಕ್ಕಿಯದಲ್ಲ, ಅಪ್ಪಟ ಗೋಧಿಯದು" ಎಂದು ಹೇಳುತ್ತಾ ಬನ್ನಿ, ನಾಳೆಯಿಂದ ಸಂಗೀತಕ್ಕೆ ತಲೆ ತೂಗುವವರೆಲ್ಲರೂ, ಅಕ್ಕಿಯನ್ನು ಮೂಸಿನೋಡುವುದೇ ಇಲ್ಲ.

(೩) ಪರೀಕ್ಷೆಗಳಲ್ಲಿ, ಈಗ ಕೊಡುವ ಎಂಟು ಹತ್ತು ಉಚಿತ ನಂಬರುಗಳ ಸಂಗಡ, ಗೋಧಿಯೋ ಆಹಾರವನ್ನಾಗಿ ಆರಿಸಿರುವ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಅಕ್ಕಿ ಉಳಿಸಿದ ಅವರ ದೇಶಸೇವೆಗಾಗಿ ೧೦ ನಂಬರು ಗ್ರೇಸ್, ಅನ್ನಿ ಇತರೇ ರೀತಿಗಳಲ್ಲಿ ಅದನ್ನು ಸಂಪಾದಿಸಲರಿಯದ ಅನೇಕರು ಅಕ್ಕಿ ಬಿಟ್ಟು, ಗೋಧಿ ಹಿಡಿದು, ಆ ೧೦ ನಂಬರನ್ನು ಗಳಿಸುತ್ತಾರೆ.

(೪) ಸಿನಿಮ ತಾರೆಯರು. ಸಿನಿಮ ಚಿತ್ರಗಳಲ್ಲಿ, ಕ್ಲೋಸಪ್ ಕೊಟ್ಟು, "ಅಕ್ಕಿ ತಿಂಬ ತರುಣರು ನಾಲಾಯಕ್ಕು" ಎಂದು ಕಥಾ ಮಧ್ಯದಲ್ಲಿ ಕೂಗಲಿ ಅರ್ಧಕ್ಕರ್ಧ ಜನ ಅಕ್ಕಿ ತಿಂಬುವುದನ್ನೇ ಬಿಡುತ್ತಾರೆ.

(೫) ಎಲ್ಲ ಡಾಕ್ಟರುಗಳೂ, ತಮ್ಮಲ್ಲಿ ಬರುವ ರೋಗಿಗಳೆಲ್ಲರಿಗೂ, "ತಲೆಗೆಲ್ಲ ಒಂದೇ ಮಂತ್ರ, ಎಲೆಗೆಲ್ಲ ಒಂದೇ ಅನ್ನ" ಎಂಬಂತೆ, ಗೋಧಿ ತಿನ್ನಿ, ಅಕ್ಕಿ ಬೇಡಿ, ಎಂದು ಹೇಳಲಿ ಮುಕ್ಕಾಲು ಜನಸಂಖ್ಯೆ ಅಕ್ಕಿ ಕೇಳುವುದೇ ಇಲ್ಲ--ಗೋಧಿಯಕಡೆ ಒಲಿಯುತ್ತಾರೆ

— ರೇವಣ್ಣ.



ಇಂದ್ರ—ರಂಭಾ, ನಾನು ಭೂಲೋಕಕ್ಕೆ ಹೋಗುತ್ತೀನಿ. ನಿನಗೇನುಬೇಕು ಹೇಳು.

ರಂಭಾ—ಈ ಅಮೃತ ತಿಂದು ಬೇಜಾರಾಗಿದೆ ಇಂದ್ರ ಎರಡು ಮಸಾಲೆ ಕಟ್ಟಿಸಿಕೊಂಡು ಬನ್ನಿ.

# ಸೀತಕ್ಕನ ಸಂಕಟ

---

ಕ್ಷೇಮ || ಶ್ರೀ || 15-3-52

ಕರಿಸಂತೆಬೀದಿ,

**ಕುಂಬ್ಳೂರು.**

ಪ್ರಿಯ ಸಾತೂಗೆ ಆಶೀರ್ವಾದಗಳು ನಿನ್ನ ಪ್ರೀತಿ ಪೂರ್ವಕವಾದ ಕಾಗದ ತಲುಪಿತು. ಕುಶಲವೇ ಅಂತ ಬರೆದಿದ್ದೀಯ. ಏನು ಬರೀಲಿ, ಏನಂತ ಹೇಳಿಕೊಳ್ಳಲಿ ನನ್ನ ಕುಶಲಾನ ಸಾತೂ! ಈ ಹಾಳು 'ಸ್ಲಂಪೋ ಗಿಂಪೋ' ಯಾಕಾದರೂ ಬಂದು ವಕ್ರಿಸಿತೋ ಅಂತೀನಿ. ಹತ್ತು ಹನ್ನೆರಡು ವರ್ಷದಿಂದ ಹಾಯ್ವಾಗಿ ·ಗೌರವದಿಂದ ಬಾಳ್ತಿದ್ದೆ .ನಾನು. ಈಗ ನನ್ನ ಬಾಳಿಗೂ 'ಸ್ಲಂಪು' ಬರೋದರಲ್ಲಿದೆ!

ಅಲ್ಲ, ನೀಕಂಡ ಹಾಗೇ ನಿಮ್ಮ ಭಾವ ನನ್ನ ಮೊದಲು ಮೊದಲು ಶಾನೆ ಹೊಟ್ಟೇ ಉರಿಸಿದರು ನೋಡು. ಎಮ್ಮೆಕ್ಸ್ಸಿ ಮಾಥೂಗೆ ಮೀಸಲಾಗಿದ್ಕೋಳನ್ನ, 'ಮೆಳ್ಳಗಣ್ಣಿ, ಮೊಸಳೆ ಮೂಗಿ' ಅಂತ ಅವನು ಎಲ್ಲೋ ಅಂದು ಬಿಟ್ಟಮೇಲೆ, ಲಗ್ನ ತಪ್ಪಬಾರದೂಂತ ಅಪ್ಪ ಇವರನ್ನ ಹಿಡಿದ್ತಂದು ತಾಳೀ ಬಿಗಿಸಿದ್ನಲ್ಲ— ಅದೇ ಅವರಿಗೆ ಹಾಸ್ಯ, ಅಲಕ್ಷ ನನ್ನ ಕಂಡರೆ! ಮಾತೆತ್ತಿದರೆ ಮೂದಲಿಸ್ತಿದ್ರು. ಅವರಮ್ಮ, ಅಕ್ಕ, ಅತ್ತಿಗೆ, ಸೋದರತ್ತೆ, ಯಾರಾದರೂ ಹೇಳಿದಕೆಲ್ಸ ನಾನೇ ನಾದರೂ ಚಾಚೂ ತಪ್ಪಿದೇ ಅಂದ್ರೆ ಸಾಕು—" ಏನೇ ಭಂಗಾರದ ಬೊಂಬೇ, ಕಂಚಿನ ಚೊಂಬೇ! ಏನೋ ಅಷ್ಟು ಭಂಗಾರ ಹೇರಿಕೊಂಡಿದ್ದೀನಿ ಅಂತ ಇಷ್ಟು ಗರ್ವಾನೋ ನಿನಗೆ?" ಅಂತ ಕಣ್ಣು ಕೆಂಪು ಮಾಡಿಕೊಂಡು ಬರುತ್ತಿದ್ದರು. ಕರೀಕುತ್ತಿಗೆ ಮುಚ್ಚಲು ಕಂಠೀ ಹಾರ, ಮೊಂಡುಗೈ ಮರೆಸಕ್ಕೆ ಎಂಟು ಜೊತೆ ಬಳೆ, ಸೊಟ್ಟ ಸೊಂಟಕ್ಕೆ ಪಟ್ಟೇಡಾಬು! ಅಂತ ರಾಗ ಎಳೆಯುತ್ತಿದ್ದಳು ಜೊತೆಗೆ ನಾದಿನಿ!

ಆದರೆ, ನನ್ನ ಗುರುದೆಶೆ, ಸುಯೋಗ; ಪುಣ್ಯಕ್ಕೆ ಯುದ್ಧ ಬಂತು ನೋಡು ಪಾತಾಳದಲ್ಲಿ ಬಿದ್ದಿದ್ದ ನನ್ನ ಮರ್ಯಾದೆ, ದಿನಕ್ಕೆ ದಿನಕ್ಕೆ, ತಿಂಗಳು ತಿಂಗಳಿಗೆ, ಮೆಟ್ಟಲು ಮೆಟ್ಟಲಾಗಿ ಏರಿತು. ಮನೇಲೆಲ್ಲರೂ ನನ್ನ ಗೌರವಿಸೋರೇ! 'ಭಾವಿ ಬಳಿ ಹೋಗಬೇಡಮ್ಮ, ಡಾಬು ಕಳಚೀತು' ಅನ್ನುವರು ಅತ್ತೆ 'ಬಟ್ಟಲುಜ್ಜಬೇಡ, ಬಳೆ ಸವಿದೀತು' ಎಂದು ಬೆದರುವರು. ಮಾವ. ಅತ್ತಿಗೆ ಮಣೆ ಹಾಕುವಳು ಕೂಡಲು, ನಾದಿನಿ ಸೀರೆ ನೆರಿಹಿಡಿದಿಡುವಳು!

ನಿಮ್ಮ ಭಾವನಂತೂ—(ಥೂ, ಬರಿಯಕ್ಕೇ ನಾಚಿಕೆಕಣೋ!)—ಬೆರಗು ಗಣ್ಣಿನಿಂದ ನನ್ನ ರತೀನೋ ರಂಭೇನೋ ನೋಡೋಹಾಗೆ ದೃಷ್ಟಿಸಿ ದೃಷ್ಟಿಸಿ ನೋಡೋದೇ! ಸವರನ್ ನಲವತ್ತಕ್ಕೇರಿದಾಗ 'ಬಾರೇ ಹೋಗೇ' ಅಂತಿದ್ದವರು "ಬಾ, ಹೋಗು" ಅನ್ನುಕ್ಕೆ ಪ್ರಾರಂಭಿಸಿದರು; ಅರುವತ್ತಕ್ಕೇರುತ್ತಲೇ "ಬನ್ನಿ, ಹೋಗಿ"ಗೆ ಬಡಾವಣೆ ಆಯಿತು; ಎಂಭತ್ತಕ್ಕೆ ಏರಿದಮೇಲಂತೂ ನನ್ನ ಅಂತಸ್ತು ಎಲ್ಲಿಗೆ ಹೋಗಿರಬಹುದೋ ಊಹಿಸಿಕೋ!....ಅಪ್ಪ ಕೊಟ್ಟ. ಎರಡು ಸೇರು ಭಂಗಾರದ ಮಹಾತ್ಮೆ ಇಷ್ಟೂನೂ!

ನಿಮ್ಮ ಭಾವನಿಗೂ ಅಂಗಡಿ ವ್ಯಾಪಾರದಲ್ಲಿ ಲಾಭ ಸುರೀತೂ ಅನ್ನು ಯುದ್ಧದ ದಯದಿಂದ. ನನ್ನ ಭಂಗಾರದ ಅಂತಸ್ತಿಗೆ ತಕ್ಕ ಹಾಗೆ ಬೇರೆ ಬಂಗ್ಲೆ ತೆಗೆದರು, ಆಳು ಕಾಳು, ಅಡಿಗೆಯವರು, ಎಮ್ಮೆ, ತೋಟ, ಮಾಲಿ ಎಲ್ಲ ಶೇಖರಿಸಿದರು. ನಾನೂ ತಕ್ಕಮಟ್ಟಿಗೆ ನೂರ ಎಂಭತ್ತು ಫೌಂಡು ತೂಕ ಶೇಖರಿಸಿದೆ! ಸಧ್ಯ ಬೆಲ್ಲದ ಕಷ್ಟ ಜನಕ್ಕೆ ಬಂದಾಗ, ಅರೆವೀಸೆಗಾಗಿ ಅರ್ಧ ಮೈಲು ಕ್ಯೂ ನಿಲ್ಲುತ್ತಿದ್ದಾಗ, ನಮ್ಮ ಗದ್ದೇ ಕಬ್ಬನ್ನೆಲ್ಲ ಆಲೆ ಆಡ್ಸಿ, ವೀಸೆಗೆ ಹದಿನಾರರ ಹಾಗೆ ಹಿತ್ತಲ ಬಾಗ್ಲಿಂದ ಸಾಗಿಸಿ, ಹೇರಳವಾಗಿ ಸಂಪಾದಿಸಿದರು ಭಾವ. ಒಂದು ಕಾರೂ ತೆಗೆದುಬಿಟ್ಟರು! ಹಾಯವಾಗಿ ಸಂಸಾರ ನಡೆಸುತ್ತಿದ್ದೆ.

ಆದರೆ, ಸಾತೂ! ನನ್ನದೆಂಥಾದುರ್ಯೋಗ ಅಂತೀನಿ! ಬರೆಯುಕ್ಕೆ ಕೈಯೇ ಓಡಲ್ಲ ಕಂಡ್ಯಾ! ಮೊನ್ನೆ ಗುರುವಾರ ಮನೇಗೆ ಬಂದರು- ನಡೆದ್ಕೊಂಡು. "ಇದೇನು! ಕಾರೆಲ್ಲಿ?" ಅಂದೆ "ಮಾರಿಬಿಟ್ಟೆ" ಅಂದರು "ಹಾ! ಹಾಗಂದ್ರೆ?....ಕಾರು ಮಾರಿದ್ರಾ?....ನನ್ನ ಗತಿ? ನಾಳೆ ನಳಿನಾಕ್ಷಮ್ಮನ ಮನೇ ಟೀ, ನಾಡಿದ್ದು ಅಶಕ್ತಪೋಷಕೀ ಸಂಘದ ಅಧ್ಯಕ್ಷತೆ ಆಚೆನಾ...."

"ಬಿಡೇ, ಸಾಕು ಬಿಡೇ!" ಅಂತ ಗದರಿಸಿ ಬಿಟ್ರಲ್ಲೇ ಸಾತೂ! "ಬಿ-ಡೇ!" ಹನ್ನೆರಡು ವರ್ಷವಾಗಿತ್ತು ಹಾಗಂದು! ನನ್ನ ಹದಿನಾಲ್ಕು ಸ್ಟೋನಿನ ಶರೀರ ಅಲ್ಲೇ ಕುಸಿದುಹೋಯಿತು ಕಣೇ!

ಭಂಗಾರ ಅರವತ್ತ ಮೂರಂತೆ ಸವರನ್ನು, ಬೆಲ್ಲ ಎರಡೂ ವರೆಯಂತೆ ವೀಸೆ!!

ಏನೋ ನನ್ನೆ ಪುರಾಣವೇ ಬರೆದು ಬಿಟ್ಟೆ. ಹುಡುಗರು, ಯಜಮಾನ್ರು, ನಾಯಿಗಳು, ಎಲ್ಲ ಆರೋಗ್ಯವೇ? ಬರೆಯುತ್ತಿರಮ್ಮ.

ಆಶೀರ್ವಾದಗಳು.
—ಸೀತಕ್ಕ

ಬೆಂಗ್ಳೂರು ಸುನಂದಮ್ಮ

# ನನ್ನ ಜವಾಬ್ದಾರಿ

---

ಊರಲಿ ಮನೆಯಲಿ ಬಂಗಲಿ ಗುಡಿಯಲಿ
ನೀರಲಿ ನೆಲದಲಿ ನಿದ್ದಿಸೆ ಜೀವಿಗ
ಕಿನ್ನಯ ಮಂಚಕೆ ಬಾರದು, ಕರೆದರು,
ಚಿನ್ನಿಗ ನಿದ್ದೆಯು, ಸೊನ್ನೆಯು ಕಣ್ಣಿಗೆ!

ನಡುನಿಶಿ ದಾಟಿತು, ಕಡುನಿಶಿ ಕೂಡಿತು,
ಕಿರು ಮುಳ್ ಮೂರಲಿ, ನಿಡುಮುಳ್ ನೆಟ್ಟಗೆ,
ಬಿಡುಗಣ್ ನೋಟದಿ ಹೊರಳಿದೆ ಬೆಡ್ಡಲಿ
ದುರುದುರು ನೋಡುತ, ನಿದ್ದೆಯೆ ಬಾರದೆ!

ಸಚಿವರು, ಡೀಎಸ್‌ಪೀಗಳು, ಡೀಸಿ
ರುಚಿ ರುಚಿ ಕನಸನು ಕಾಣುತಲಿರುವರು!
ಹಾಲಿ ಮಂತ್ರಿಗೂ ಮಾಜಿ ಮಂತ್ರಿಗೂ
ಪೋಲೀಸರಿಗೂ ನಿದ್ದೆಯು ಬಂದಿದೆ

ಧಾವಣಿ ಹೊದ್ದವ, ರೇವಣಿ ಹೋಡವ,
ಸೇವಕ ಮೇವಕ ಷೇವಕ ವೃಂದವು,
ಜೀವಿಗ ಬಿಲ್ಲಿಗ ಕಾಶಿಗ, ಲ್ತಾರಿಗ,
ಲೇವಾದೇವಿಯ ಅರ್ಚಕ, ಚರ್ಚಿಗ,

ಜವಹರ ಚಿಂಗಲ ಮುನ್‌ಷೀಕೆಂಗಲ
ಬಲದೇವ್ ಕೈಲಾಸ್ನಾಥನು ರಂಗಾ
ಪಂತರು ಶುಕ್ಲರು ಬೀಸೀರಾಯರು
ಜನರಲ ಕಾರೀಯಪ್ಪನು ಕೂಡ

ಎಲ್ಲರು, ನಿದ್ದೆಲಿ ತೇಲುತ ಲಿರುವರು;
"ಹಲ್ಲೋ" ಎನ್ನಲು ಒಬ್ಬರು ಇಲ್ಲ!
ಗುಲ್ಲೋ ಗುಲ್ಲು ಎದ್ದಿತು—ಎಂದರೆ,
ಇಲ್ಲಿರುವುದು ನಾನೊಬ್ಬನೆ! ಎಚ್ಚರ!

—ಆದಿಶೇಷ

# "ಪಾಪ!"

---

ಪಾಪ! ತಿಮ್ಮ ಎಣ್ಣೆಡಬ್ಬವನ್ನು ಬೈಸಿಕಲ್ ಕ್ಯಾರಿಯರ್‌ಗೆ ಕಟ್ಟಿಕೊಂಡು ರಾಯರ ಮನೆಗೆ ಬರುತ್ತಿದ್ದ. ಅರ್ಧದಾರೀಲಿ ಒಂದು ಕರೀಬೆಕ್ಕು ಅಡ್ಡಲಾಗಿ ಬಂದು, ಮುಂದಿನ ಚಕ್ರಕ್ಕೆ ಸಿಕ್ಕಿಕೊಂಡು ಹರೋಹರ ಅಂತ ಒಂಭತ್ತು ಪ್ರಾಣಗಳನ್ನೂ ಕಳೆದುಕೊಂಡಿತು. ಈ ಗಲಾಟೆಯಲ್ಲಿ ತಿಮ್ಮನ ಬೈಸಿಕಲ್ಲು ಕೆಳಗೆ ಬಿತ್ತು. ಅದರ ಮೇಲೆ ಅವನು ಬಿದ್ದ. ಅವನ ಮೇಲೆ ಎಣ್ಣೆ ಡಬ್ಬ, ಮುಚ್ಚಳ ಕಳಚಿಕೊಂಡು ಬಿತ್ತು. ಎಣ್ಣೆಯಲ್ಲಾ ಅವನಿಗೂ ಬೈಸಿಕಲ್ಲಿಗೂ ರಸ್ತೆಗೂ ಹಂಚಿಹೋಯ್ತು !

ತನಗೆ ಬಿದ್ದ ಏಟನ್ನೂ ಗಮನಿಸದೆ, ಸತ್ತ ಬೆಕ್ಕನ್ನೂ ನೋಡದೆ, ತಿಮ್ಮ ಲಬೋ ಲಬೋ ಲಬೋ ಶುರು ಮಾಡಿದ. "ರಾಯರ ಮನೆ ಎಣ್ಣೆ ಎಲ್ಲಾ ಚೆಲ್ಲಿಹೋಯ್ತು. ಸಂಬಳದಲ್ಲಿ ಇದನ್ನೂ ಹಿಡಿದುಹಾಕ್ತಾರೆ ರಾಯರು, ತಿಂಗಳೆಲ್ಲಾ ಹೆಂಡತಿ ಮಕ್ಕಳು ಉಪವಾಸವಲ್ಲಪ್ಪಾ" ಅಂತ.

ಸುಮಾರು ಜನ ಸುತ್ತಲೂ ಗುಂಪು ಕಟ್ಟಿಕೊಂಡಿದ್ದರು ಇದನ್ನೆಲ್ಲಾ ನೋಡಲು. ಯಾರೂ ಇವನ ಸಹಾಯಕ್ಕೆ ಅಂತ ಮುಂದೆ ಬರಲಿಲ್ಲ. ಇನ್ನೊಬ್ಬಾತ, ಒಳ್ಳೆಯ ಪೋಷಾಕು ಧರಿಸಿದವ, ಬಂದು ಎಲ್ಲರನ್ನೂ ಉದ್ದೇಶಿಸಿ "ಪಾಪ" ಬಡವ, ಏಟೂ ತಿಂದಿದ್ದಲ್ಲದೆ ಹಣವನ್ನೂ ಕಕ್ಕ ಬೇಕಾಗುತ್ತೆ. ಇವನಿಗೇನಾದರೂ ಸಹಾಯ ಮಾಡಿ ಅಂತ ಕರ್ಚೀಫ್ ಹಾಸಿ ತಾನು ಒಂದು ರೂಪಾಯಿ ಹಾಕಿದ. ಎಲ್ಲರೂ ಯಥಾನು ಶಕ್ತಿ. ನಾಲ್ಕಾಣಿ ಇಂದ ಎಂಟಾಣೆ ತನಕ ದುಡ್ಡು ಹಾಕಿದರು. ಸುಮಾರು ಹಣ ಜಮಾ ಆಯಿತು ಎಲ್ಲರೂ ಹೊರಟು ಹೋದರು.

ಆಗ ಒಳ್ಳೆಯ ಪೋಷಾಕಿನವ, ದುಡ್ಡನ್ನೆಲ್ಲಾ ಎಣಿಸಿ ಜೋಬಿಗೆ ಹಾಕಿಕೊಂಡು, ಪರವಾಗಿಲ್ಲಾ ! ತಿಮ್ಮಾ! ಎರಡು ರೂಪಾಯಿ ಖರ್ಚಾಬು ಎಣ್ಣೆ ಚೆಲ್ಲಿದ್ದಕ್ಕೆ—ಆರು ರೂಪಾಯಿ ಜಮಾ ಆಯ್ತು. ನಾಳೆ ದಿನ, ಈಶ್ವರ ಪುರದಲ್ಲಿ ಈ ಆಟ ಹೂಡೋಣ ಅಂತ ಹೇಳಿ ಹೊರಟ.

ಯಾಕೆ ಹೇಳುಕ್ಕೆ ಬಂದೆ ಅಂದರೆ—ಈಗೀಗ ಎಲ್ಲರ ಕಷ್ಟಕ್ಕೂ ಎಲ್ಲರೂ ಆಗಬೇಕು ಅಂತ, ಒಬ್ಬಿಬ್ಬರು ಮುಂದಾಳು ತನ ವಹಿಸಿ ಟಟಕಟ್ಟಿ ಹೊಟ್ಟೇ ಪಾಡು ಹೊರೆದು ಕೊಳ್ಳೋದು ಹೆಚ್ಚಾಗ್ತಾ ಇದೆ ಅಲ್ಲವೆ? ಕಣ್ಣಿಟ್ಟು ನೋಡಿ ಆದರೆ ಇಂತಹುದೆಲ್ಲಾ ಬಲುಬಲು ಕಾಣಿಸುತ್ತೆ ಅಲ್ಲವೇ?

—o—



" ಥತ್! ಆ ಹಾಳು ಪೆನ್ಸಿಲ್ ಎಲ್ಲಿ ಬಿಟ್ಟೆ! "

# ಹೊಡಿ

(ವಿಸೀಯವರ 'ಅಭೀಃ' ಎಂಬುದನ್ನನುಸರಿಸಿ)

---

ಶಾಂತಿ ಪಾಠವ ಸೀಳಿ ಕೊಬ್ಬುತಿದೆ ಊಳುತಿದೆ
ಎತ್ತರದ ಕರ್ಟನ್ನ ನೊಡ್ಡಿ ಕಾಡುತಿದೆ!
ಉಳಿದೆಲ್ಲ ಯುಕುತಿಗಳ ಮುಳುಗಿಸುತ ಬೊಗಳುತಿದೆ
ಮಾರಿ ಹೆಬ್ಬಾಂಬುಗಳ ಹಿಡಿದೆತ್ತಿ ಬೀಸುತಿದೆ

—ಹೊಡಿ! ಹೊಡಿ! ಹೊಡಿ! ಎಂಬ ಸುರವಾಣಿಯುದು
ಜೀಸಸ್ಸು ಬುದ್ಧರನೆ ಬಾಯ್ಮುಚ್ಚಿ ಕೂಗುತಿದೆ
ಸಾಲದಾ ಸಾಮ್ರಾಜ್ಯದಾಸೆಯಿಂದ.

ಲಾಬರೇಟರಿಯಿಂದ ಚೇರಿಂದ ಬೆಂಚಿಂದ
ಕೊಂದು ಸತ್ತುದನೆಲ್ಲ ಮರೆದತ್ತಣಿಂದ
ಕಣ್ಣುಗಾಣದರಿಂದ ಹಸಿವಿಂದ ಮದದಿಂದ
ವಿಷಕೀಟ ಸಮರಕ್ಕೆ ರೆಡಿಮಾಡಿದವರಿಂದ
—ಹೊಡಿ! ಹೊಡಿ! ಹೊಡಿ! ಎಂಬ ಕಿಡಿ ಏಳುತಿದೆ
ಗಾಂಧಿತನ ದಳುಕುಗಳ ಓಟಿಸಿದೆ, ಬೆದರಿಸಿದೆ,
ವೀರ ಮುಖಾರ್ತರವ ಊಡಿಸುತಿದೆ.

ಬಲಹೀನರನ್ನೆತ್ತಿ ರೈಫಲನು ಕೊಡಿಸಿಹರು!
ಕೋವಿ ಬಲವಲ್ಲೆಂದರೇ ಗೈಯ್ವರು?
ಛಲಹೊತ್ತ ಚರ್ಚಿಲ್ಲಿನಂಡಲೆಗೆ ಹೆದರುವರು.
ಮುಂದೆಮ್ಮ ಬಾಧಿಸುವರೆಂದಿನ್ನು ಕೆರಳುವರು.

—ಹೊಡಿ! ಹೊಡಿ! ಹೊಡಿ! ಎಂಬ ಹಿಗ್ಗಿನ ಬಿತ್ತು
ನರದ ಕೆಂಗೆಸರಿನಲಿ ಹೊಲಸಾಗಿ ಬೆಳೆಯುತಿದೆ
ಜನರ ಹಿತವನು ಕೆಡಿಸಿ ನಿಡು ಹಬ್ಬಿದೆ.

ಆಗ—

ಶಿವನ ಸಮುದ್ರದಲ್ಲಿ ವಿದ್ಯುಚ್ಛಕ್ತಿಯನ್ನು ತಯಾರಿಸುವುದು ಅಸಾಧ್ಯ ಎಂದು ಆ ಆಂಗ್ಲೇಯ ಇಂಜನೀಯರುಗಳು ಹೇಳಿದಾಗ ಸರ್ ಕೆ. ಶೇಷಾದ್ರಿ ಐಯ್ಯರ್‌ರವರು ಅದು ಸಾಧ್ಯ ಎಂದು ತೋರಿಸಿ ೧೯೦೨ರಲ್ಲಿ ಶಿವನ ಸಮುದ್ರದಲ್ಲಿ ಮೊಟ್ಟಮೊದಲನೆಯ ಹೈಡ್ರೊ ಎಲೆಕ್ಟ್ರಿಕ್ ಸ್ಟೇಷನ್ನು ನಿರ್ಮಿಸಿ, "ಮಾದರಿ ಮೈಸೂರು" ಎಂಬ ಪ್ರಖ್ಯಾತಿಗೆ ಕಾರಣರಾದರು.

ಈಗ—

೧೯೪೮ರಲ್ಲಿ ಪಾಶ್ಚಾತ್ಯ ಇಂಜನಿಯರುಗಳು ಭಾರತದಲ್ಲಿ "ಸ್ವಿಚ್ ಗೇರ್" ತಯಾರಿಕೆಯೂ ಅಸಾಧ್ಯ ಎಂದರು.

ಮೈಸೂರು ಇಂಜನಿಯರುಗಳು ಭಾರತದ ಪ್ರಪ್ರಥಮ ಕಾರ್ಖಾನೆಯನ್ನು ಬೆಂಗಳೂರಿನಲ್ಲಿ ಆರಂಭಿಸಿ "ಸ್ವಿಚ್‌ಗೇರ್" ತಯಾರಿಕೆಯು ಸಾಧ್ಯ ಎಂದು ತೋರಿಸಿ "ಮಾದರಿ ಮೈಸೂರು" ಎಂಬುದನ್ನು ಸಾರ್ಥಕಗೊಳಿಸಿದರು,

ಇಂದು—

೧೯೫೨ರಲ್ಲಿ 100 H.P.ಯ L. T. Motor Control ಮತ್ತು 800 amperes Oil Circuit Breakers ಅನ್ನೂ, "ಸ್ವಿಚ್‌ಗೇರ್" ಗಳನ್ನು ಭಾರತದಲ್ಲಿ ತಯಾರಿಸುವ ಏಕಮೇವ ಕಾರ್ಖಾನೆ ಆಗಿದೆ.



—ವಿವರಗಳಿಗೆ :—

## The Mysore Electrical Industries Ltd.

**P. O. 61, BANGALORE 2**

— OR —

## I. A. E. C. (Mysore) Ltd.

**P. O. 100, BANGALORE 2**

ಶ್ರೀ

[illegible]

[illegible]

ಪ್ರಿಯ ಓದುಗ,

ನಂದನನಾಮ ಸಂವತ್ಸರದಲ್ಲಿ ನಿಮಗೆಲ್ಲರಿಗೂ ಭಗವಂತನು ಶಾಂತಿ ಸೌಭಾಗ್ಯ ಆಯುರಾರೋಗ್ಯಗಳನ್ನು ಕರುಣಿಸಲಿ. ನಿಮ್ಮ ಮನೆಯು ನಂದನವನದಂತೆ ಆಗಲಿ, ಆಗಬಹುದಾದ ಬೇವು ಪ್ರಸಂಗಗಳೆಲ್ಲಾ ಬೆಲ್ಲದಂತಹ ಪ್ರಸಂಗಗಳಿಂದ ನಿಮಗೆ ಕಹಿ ತೋರದೆ ಸಿಹಿ ಕಾಣಿಸಲಿ.

[illegible] ಮನಸಾರೆ ಹಾರೈಸುವ,

[illegible] ಕಿರ್ಲೋಸ್ಕರ ಬಂಧುಗಳು.

ಜೋಡಿಸದು, ಕೂಡಿಸದು, ತುಂಡರಿಸಿ ಒಡೆಯುವುದು,
ನಾಡು ನಾಡಿನ ನಡುವೆ!....ಭಾರತದ ಒಳಗೂ!
ನಾಯಕರ ಕಣ್ಣವೆಯ ಮುಚ್ಚಿ ಹಿಡಿದರು ಮಾತ್ರ
ಹೊಸ ಮೋಸದೊತ್ತಿನಲಿ ಮೇಲೆದ್ದಿದೆ.

—ಹೊಡಿ! ಹೊಡಿ! ಹೊಡಿ! ಇದೆ ತಂತ್ರವೆನ್ನುತ್ತೆ
ಎಂಟು ಬಣ್ಣದ ಫ್ಲಾಗ ಹಿಡಿದೆತ್ತಿ ಮೆರೆಯುತಿದೆ
ಕೂರ್ಗ್ಗರಲ ಖಡ್ಗವನು ಮೇಲೆತ್ತಿದೆ

ಯುಗದಗಲ ಜಗದಗಲ ನಮ್ಮಿಸಮು ನಿಂತೀತು!
ಪೆಟ್ರೋಲು ರಬ್ಬರವು ನಮಗೆ ಬೇಕು!
ನಿಜವೆಂಬ ನಯವೆಂಬ ನಲವೆಂಬ ಒಲವೆಂಬ
ಧರ್ಮಗಳು ಬರಿಭ್ರಾಂತು! ಕತ್ತಲಿಟ್ಟಾವು!

—ಹೊಡಿ! ಹೊಡಿ! ಹೊಡಿ! ಎಂಬ ಯುದ್ಧ ತಾರಕವೆ!
ತಕ್ಷಣವೆ ಜಗದಲ್ಲಿ ಲಕ್ಕ್ಯನ್ನು ಕಾಣಿವುದು,
ಲಕ್ಷಲಕ್ಷದ ಜನರ ಹಿಂದಿಕ್ಕಿ ಗೆಲ್ಲಿವುದು.

ದಣಿಯದಿಹ ರೇಡಿಯೋ, ಬಾಂಬಿಸುವ ಹಟವೊಂದು,
ನಿಜದ ಸೋಗಿನ ಸುಳ್ಳು ಪೇಪರೊಂದು
ಅನ್ಯಾಯ ರಿಂದೆಂದು ನಾಚದಾ ಮೆದುಳೊಂದು
ಮೌಢ್ಯಕ್ಕೆ ದ್ವೇಷಕ್ಕೆ ಚಿರ ತೆರೆದ ಮನವೊಂದು

—ಹೊಡಿ! ಹೊಡಿ! ಹೊಡಿ! ಎಂಬ ಮಾರಕವಾಕ್ಯ
ನಾಡನ್ನು ಸುಡಿಸುತಿರೆ, ಬಾಳನ್ನು ಕೆಡಿಸುತಿರೆ
ನಡೆನರಕಕೆನ್ನುತ್ತೆ ಕೂಗುತಿದೆ, ಕುಗ್ಗಿಸುತಿದೆ.

—ಪಾಟೀಳ.




" ಆಸ್ಪತ್ರೆ ದಾರಿ ಗೊತ್ತೇನ್ರೀ ನಿಮಗೆ? "

# ತುಳಸೀ ತೋಟ



ಮೊದಲನೆಯದಾಗಿ, ನನ್ನ ತಾಯಿ ತಂದೆಯದೇ ತಪ್ಪು. ನನಗೂ, ನನಗಿಂತ ಎರಡು ವರ್ಷ ಹಿಂದೆ ಹುಟ್ಟಿದ ರಾಜನಿಗೂ ಅವರು ಪೈಪೋಟಿ ಮನೋಭಾವ ಬೆಳೆಸಿದರು. ಯಾರು ಮೊದಲು ಓಡುತ್ತಾರೆ, ಅಂಗಿ ತೊಡುತ್ತಾರೆ. ಸ್ನಾನ ಮುಗಿಸುತ್ತಾರೆ, ಊಟ ಪೂರೈಸುತ್ತಾರೆ, ಎಂಬ ಪೈಪೋಟಿ, ಗೆದ್ದವರಿಗೆ ಶಹಭಾಸ್‌ಗಿರಿ, ಸೋತವರಿಗೆ ಛೀ ಮಾರಿ.

ಶಾಲಾ ಮಾಸ್ತರುಗಳೂ ಅದೇದಾರಿ ಹಿಡಿದರು. ಪಂದ್ಯ ಮೇಲಾಟ ಪೈಪೋಟಿ, ಗೆದ್ದವರಿಗೆ ಬಹುಮಾನ, ಸೋತವರಿಗೆ ಸೊನ್ನೆ. ಸೋತವರಿಗೆಲ್ಲ ಗೆದ್ದವರಮೇಲೆ ಕೋಪ, ದ್ವೇಷ, ಗೆಲ್ಲಿಸಿದವರ ಮೇಲೆ ಅನುಮಾನ, ಆಕ್ರೋಶ. ಸ್ಕೂಲ್‌ಡೇ ದಿನ ಆ ಮಹಾ ಬೃಹಸ್ಪತಿಗಳನ್ನ, ಪುಸ್ತಕದ ಹುಳಗಳನ್ನ, ಅಟ್ಟದ ಮೇಲೆ ಕೂರಿಸಿ ಚಪ್ಪಾಳೆ ಸಹಿತ ಗೌರವಿಸುವುದು. ಸೋತ ನಾವು, ಮಾವಿನ ತೋರಣ ಕಟ್ಟಬೇಕು, ಎಂಜಲು ದೊನ್ನೆ ಎತ್ತಬೇಕು, ಬೆಂಚು ಹೊರಬೇಕು.

ಮದುವೆಗೂ ಅದೇಗೋಳು. ಮಂತ್ರಿಗಳ ಹುಡಿಗಿಯರು, ಡೆಪ್ಯುಟಿಕಮಿಷನರ ಹುಡುಗಿಯರು, ಒಂದೂ ನಮಗೆ ದೊರೆಯುವಹಾಗಿಲ್ಲ. ಅವಕ್ಕೂ ಪೈಪೋಟಿ. ಸೋತವರಿಗೆ ಸಿಗುವ ವಧುಗಳೆಂದರೆ. ಸ್ಕೂಲ್‌ಮಾಸ್ತರ ಮನೆ ಹೆಣ್ಣುಮಕ್ಕಳೇನೆ. ಅವನು ಎಂಥ ಅಯೋಗ್ಯನಾಗಿರಲಿ, ಕುರೂಪಿಯಾಗಿರಲಿ, ಸಿಡುಕನಾಗಿರಲಿ, ಫಸ್ಟ್‌ಕ್ಲಾಸ್ ಹೊಡೆದದ್ದು ಹ್ಯಾಗಾದರೂ ಆಗಿರಲಿ, ಅವನ ಬಾಗಿಲ ಮುಂದೆ ಮಂತ್ರಿಗಳೆಲ್ಲ ಹಾಜರಿ, ಅಳಿಯನಾಗು, ಅಮೇರಿಕಾಕ್ಕೆ ಕಳಿಸಿಕೊಡುತ್ತೇನೆ, ಅಂತ. ಅಪ್ಪಿತಪ್ಪಿ ಸೆಕಂಡ್ ಕ್ಲಾಸ್ ಬಂತು ಅಂದ್ರೆ ಸರಿ, ಅಸಿಸ್ಟಂಟ್ ಕಮಿಷನರ್ ಕೂಡ ಅತ್ತಲಾಗೆ ಸುಳಿಯುವುದಿಲ್ಲ, ಹೆಣ್ಣು ಕೊಡುತ್ತೇನೆ, ಅಂತ. ತಿರುಗಿ, ಇವರ ಭಾಷಣದಲ್ಲೆಲ್ಲ, ದೀನಸೇವೆ, ಹಲಿತೋದ್ಧಾರ, ಇವೇನೆ.

ನೌಕರಿ ಗಿಟ್ಟಿಸುವುದಕ್ಕೂ ಇದೇ ಪೈಪೋಟೀನೇ. ಅದರಲ್ಲಿ ಗೆಲ್ಲುವವರೂ ಇಂಥವರೆ. ಕಾರಲ್ಲಿ ಯಾರಾದರೂ ಕರೆದುಕೊಂಡು, ನೆಟ್ಟಗೆ, ದಫೇದಾರ್‌ನ ಅಚಿತಳ್ಳಿ, ಅಚ್ಚುಮಾಡಿಸಿದ ಕಾರ್ಡನ್ನ ಹಣ್ಣುಹಂಪಲು ಸಹಿತ ಒಳಕ್ಕೆ

ಕಳುಹಿಸಿ, ಗಾಬರ್ಡೀನ್ ಸೂಟ್‌ನ ತೋರಿಸಿಬಿಡ್ತಾರೆ. ಅಂತವರಿಗೆ ನೂರೈವತ್ತರ ಅವಕಾಶ ಖಾತ್ರಿ.

ಸೋತವರು ನಾವು ಲೆನಿನ್ ಸ್ಟ್ಯಾಲಿನ್ ಅಂತ ಹನ್ನೆರಡಾಣೆ ಪುಸ್ತಕಾನ ತುಳಸೀತೋಟದ ದೀಪದಕಂಬದ ಕೆಳಗೆಕೂತು ಓದಿಕೊಂಡು, ಗಡ್ಡ ಬೆಳೆಸಿ, ಕಣ್ಣು ಕೆಂಪಗೆ ಮಾಡುತ್ತಿರುತ್ತೇವೆ. ಪೈಪೋಟಿಯೇ ಇಲ್ಲದ ಜಗತ್ತಿಗಾಗಿ ಹಾ ತೊರೆಯುತ್ತೇವೆ.

ಅವರವರ ವೇಗದಲ್ಲಿ ಅವರವರು ಓಡಲಿ, ಅವರವರ ಮೆದುಳಿಗೆ ತಕ್ಕಂತೆ ಅವರವರಿಗೆ ವಿದ್ಯಾಭ್ಯಾಸ, ಅವರವರ ಅವಶ್ಯಕತೆಗೆ ತಕ್ಕಂತೆ ಅನ್ನಾಹಾರ, ದೇಶಸೇವಾವಕಾಶ; ಮೇಲುಕೀಳು, ಗೆದ್ದವ ಸೋತವ, ಚಿನ್ನದ ಪದಕ ಹಿತ್ತಾಳೆ ಪದಕ ಎಂಬ ಮಾನವೀಕೃತ ಏರು ಪೇರುಗಳಿಲ್ಲದ ಹೊಸಯುಗದ ನಿರ್ಮಾಣ—ಇವು ಬರಬೇಕಾದರೆ, ತಾಯಿ ತಂದೆಯರನ್ನೇ ಮೊದಲು ತಿದ್ದ ಬೇಕಾಗುತ್ತದೆ.

—ಕುಮಾರ ಸಂಕಣ್ಣ.

---




ಎಲ್ಲೋ ಸಿಕ್ಕಿತು, ನಿನಗೆ ಅಷ್ಟು ಆಹಾರ—ನಮ್ಮ ದರ್ಬಾರಿನಲ್ಲಿ

# "ಕೀ"—ಕಷ್ಟ

ಶರ್ಮ ಸಮಿತಿಯುವರು ಕನ್ನಡದ ಟೈಪ್‌ರೈಟರೊಂದನ್ನು ಸಿದ್ಧಪಡಿಸುವ ಸಲುವಾಗಿ ತಮ್ಮವರದಿಯನ್ನು ತಯಾರುಮಾಡುತ್ತಿದ್ದಾಗಲೂ, ತ್ತಿದ್ದಮೇಲೂ, ಕನ್ನಡ ಪ್ರಪಂಚದಲ್ಲಿ, ಹೊಸ ಚಳುವಳಿ ಒಂದು ಪ್ರಾರಂಭವಾಗಿದೆ, ಎಂಬುದು ವಾಚಕರಿಗೆ ಗೊತ್ತಿಲ್ಲದೆ ಇರಬಹುದು. ಕನ್ನಡ ಲಿಪಿಯನ್ನು ಸುಧಾರಿಸಿ, ಇಂಗ್ಲೀಷಿನ ಕೀ ಬೋರ್ಡಿನ ಗುಂಡಿಗಳ ಸಂಖ್ಯೆಗೆ ಇಳಿಸಿ, ಆದಷ್ಟು ಸುಗಮ ವಾಗಿ ಟೈಪ್‌ರೈಟರನ್ನು ಸಿದ್ಧಪಡಿಸುವುದೇ ಈ ಚಳುವಳಿಯ ಉದ್ದೇಶ. ಮಹಾ ಪ್ರಾಣಗಳನ್ನು ವಿಥವಿಥವಾಗಿ ರಚಿಸುವುದರ ಬದಲು, ಚ ಜ ಟ ಇವುಗಳ ಹೊಕ್ಕ ಳನ್ನು ಸೀಳಿಯೂ. ಕ ತ ಗ ಇವುಗಳ ಪಕ್ಕೆಗಳನ್ನು, ಸೀಳಿಯೂ, ಬರೆಯ ಬಹುದು. ಹಾಗೆ ಮಾಡಿದರೆ, ಖ ಘ ಛ ಝ ಠ ಥ ಎಂಬ ಆರಕ್ಷರಗಳನ್ನು ಸಂಪೂರ್ಣವಾಗಿ ತ್ಯಜಿಸಬಹುದು. ಅಲ್ಲದೆ ಋ ೠ ಎಂಬ ಎರಡಕ್ಷರಗಳೂ ನಮಗೆ ಬೇಕೇಯಿಲ್ಲ; ರುಣ ರುಷಿ, ಎಂದು ಬರೆದರಾಯಿತು, ಹೀಗೆ ಮಾಡಿದರೆ ಇನ್ನೆರಡು ಕೀ ಗಳು ಉಳಿಯುತ್ತವೆ. ಔನೂ ಬೇಕಿಲ್ಲ; ಅವುತಣ, ಅವುಟಾದ ಎಂದು ಬರೆದರಾಯಿತು. ಉ ಕಾರದ ಕೊಂಬನ್ನು ಬಾಡಕ್ಕೆ ಕೊಡುವುದ ಕ್ಕಿಂತ, ಪಕ್ಕದಲ್ಲೇ ಕೊಡೋಣ. ಕ್ಕ, ಪ್ಪ, ತ್ಥ, ತ್ನ, ಇತ್ಯಾದಿ ಎಲ್ಲ ಒತ್ ತಕ್‌ಕ್ಷರಗಳನ್‌ನೂ ಪಕ್‌ಕ ಪಕ್‌ಕದಲ್‌ಲೋ ಅಚ್‌ಚು ಮಾಡಿದರಾಯಿತು—ಇತ್ಯಾದಿ ನೂರಾರು ಸಲಹೆಗಳು ಜಾಣಕನ್ನಡಿಗರ ಮೆದುಳಿಂದೀಚೆಗೆ ಹರಿದು ಹರಡುತ್ತಿದೆ.

ಆದರೆ, ಕೊರವಂಜಿಯ ವಾಚಕ ವೃಂದ, ಇತರ ಪತ್ರಿಕೆಗಳ ವಾಚಕ ವೃಂದಕ್ಕಿಂತ ಬುದ್ಧಿ ಸೂಕ್ಷ್ಮತೆಯಲ್ಲಿ ಮೇಲೆನಿಸಿ ಕೊಂಡಿರುವುದರಿಂದ, ಅವರ ಅವಗಾಹನೆಗಾಗಿ ನನ್ನದೊಂದು ಮಹಾಸಲಹೆ ಟೈಪ್‌ರೈಟರು ನಿರ್ಮಾಣ ಕೀ ಬೋರ್ಡು ಜೋಡಣೆ ಗುಂಡಿಗಳ ಸಾಲಿನ ಸೃಷ್ಟಿ ಲಿಪಿ ಸುಧಾರಣೆ, ಇವೆಲ್ಲ ಕ್ಕಿಂತ ಸುಲಭವಾದ ದಾರಿ, ದೇಶಾಭಿಮಾನ ಭಾಷಾಭಿಮಾನ ಇವೆರಡನ್ನೂ ಉಳಿಸಿ ಕನ್ನಡದ ಕಲಿತನ ಬೆಳೆಸುವ ದಾರಿ, ಅಲ್ಲದೆ. ಟೈಪ್‌ರೈಟರನ್ನೂ ಹಸ ನಾಗಿಸುವ ಏಕಮಾತ್ರ ದಾರಿ, ಕೀ ಬೋರ್ಡನ್ನು ಸುಲಭವಾಗಿಸುವ ದಾರಿ:—ಏಕೆಂದರೆ, ಅದೇ ನಮ್ಮ ಈ ಮಹಾಸಲಹೆ!

ಅಕ್ಷರಗಳು, ಪಾಪ, ಏನು ಮಾಡ್ಯಾವು? ಭಾಷೆಗೆ ತಕ್ಕಂತೆ ಅಕ್ಷರ. ತೆಲುಗಿನಲ್ಲಿ ತ್ಸ ಹೆಚ್ಚು, ಚೀನಿಯಲ್ಲಿ ಙಂಗ್ ಜಾಸ್ತಿ, ಬಂಟುವಿನಲ್ಲಿ ಕ್ಷ್ಲ ವಿಪ ರೀತ, ಇಂಗ್ಲೀಷಿನಲ್ಲಿ (F) ಫ್ ಬಹಳ, ಪ್ಸ ಎಂಬುದು ಗ್ರೀಕ್‌ರ ಚಾಳಿ.

ನಮ್ಮಲ್ಲಿ ಒತ್ತಕ್ಷರಗಳು, ಮಹಾ ಪ್ರಾಣಗಳು, ಙಾಕಾರ ಞಕಾರ, ಬಂದಿರು ವುದು ನಾವು ಕನ್ನಡವನ್ನು ಮರೆತು ಸಂಸ್ಕೃತಕ್ಕೆ ಶರಣ ಹೋಗಿರುವುದರಿಂದ ತಮಿಳರನ್ನು ನೋಡಿ, ಅಚ್ಚುತಮಿಳು ಬರೆಯಲು ಅವರಿಗೆ ಅಕ್ಷರಗಳೇ ಬೇಕಿಲ್ಲ!

ಆದ್ದರಿಂದ. ಶರ್ಮ ಸಮಿತಿಯವರು ಮೊದಲು ಭಾಷಾ ಸುಧಾರಣೆಗೆ ಗಮನ ಕೊಡ ಬೇಕಾಗಿತ್ತು. ಮೊದಲು ಎಷ್ಟು ಕೀ ಗಳು ಸಾಧ್ಯ ಅಂತ ಲೆಕ್ಕ ಇಟ್ಟುಕೊಳ್ಳೋದು. ನಲವತ್ತಾರೋ ಮೂವತ್ತಾರೋ, ಎರಡುಸಾಲೋ ಮೂರುಸಾಲೋ, ಎಷ್ಟೋ ಅಷ್ಟಕ್ಕೆ ನಿಗದಿ ಮಾಡಿಕೊಂಡು, ಎರಡನೆಯದಾಗಿ ಅಷ್ಟರಲ್ಲಿ ಅಡಕಮಾಡಬಹುದಾದ ಅಕ್ಷರಗಳ ಚಿಹ್ನೆಗಳು ಯಾವಯಾವುವು ಅಂತ ನಿಶ್ಚಯಿಸಿ, ಮೂರನೆಯದಾಗಿ ಇಡೀಕನ್ನಡ ಭಾಷೆಯನ್ನೇ ಅದಕ್ಕೆ ಸರಿ ಯಾಗಿ ಸುಧಾರಿಸಿ ಬಿಟ್ಟಿದ್ದರೆ, ಮುಂದಿನ ಮಂತ್ರಿಮಂಡಲ ಅಧಿಕಾರಕ್ಕೆ ಬರುವ ದಿನ, ಮಂತ್ರಿಗಳ ಹೆಸರನ್ನೆಲ್ಲ ಕನ್ನಡದಲ್ಲೇ ಟೈಪ್ ಮಾಡಿ ಹಂಚ ಬಹುದಾಗಿತ್ತು.

## ಉದಾಹರಣೆ

ತ್ರಿ ಎಂಬ ಅಕ್ಷರ ಬೇಕೆ ಬೇಡವೆ? ಶರ್ಮ ಸಮಿತಿಯವರಿಗೆ ಅದು ಬೇಡ ವೆಂದರೆ. "ತ್ರಿ" ಇಲ್ಲದೆಯೆ ಭಾಷೆಯನ್ನು ಮಾರ್ಪಟಿಸಬೇಕು, ಬಹುದು ಮಂತ್ರಿ ಎಂಬ ಮಾತೇ ಇಲ್ಲದೆ, ಶತಮಾನಗಳು ನಾವು ಇರಲಿಲ್ಲವೆ. ಸಚಿವ ಸಾಕು. ವಿಜಯನಗರದ ಅರಸರುಗಳಂತೆಯೇ ನಾವೂ ಬಾಯಿತುಂಬ "ಹಡಪದವನು" ಎನ್ನೋಣ ಪೋರ್ಟ್ ಪೋಲಿಯೊ ಹೊತ್ತವರಿಗೆ–ಹಣದ ಹಡಪ. ವನದ ಹಡಪ. ಶಾಲಾಹಡಪ—ಏಕಾಗ ಬಾರದು? "ಮುಖ್ಯಮಂತ್ರಿ" ಖ್ಯಾನೂ ಬೇಡ, ತ್ರೀನೂ ಬೇಡ, "ಮೊದಲ ಸಚಿವ", ತೀರಿತು. "ತಲೆಹಡ ಪದವನು" ಸಾಲದೆ? ಷ್ಟ, ಬೇಡ, ನಾಡು, ಇದ್ದೇ ಇದೆ. "ಆರ್ಥಿಕ ಮುಗ್ಗಟ್ಟು" ಬೇಡ, "ಆಶಾನಿರಾಶೆ ಸಾಕು, ಅಥವಾ, ಹಣ ಬರಗಾಲ; ನಿರಂಕುಶ ಪ್ರಭುತ್ವ ಏಕೆ, "ಬರೆಗಾಲ" ಅಂದರೆ ಆಯಿತು. "ಪೌರಸ್ತ್ಯ" ಎಂದು ಏಕೆ ಹೇಳಬೇಕು, "ಮೂಡಲವ" ಸಾಲದೆ? "ಪಡುವಲವ" ಎಂದರೆ, ಪಾಶ್ಚಿಮಾತ್ಯ ಹೋಗುತ್ತೆ ಒತ್ತಿಲ್ಲದೆ, ಮಹಾಪ್ರಾಣವಿಲ್ಲದೆ, ಕೀ ಬೋರ್ಡ ನಲ್ಲಿ ಅಳವಡಿಸಲು ಬರುವ ಅಕ್ಷರ ಮಾಲೆಯನ್ನೇ ಬಳಕೆಗೆ ತರುವಾಗ, ನಷ್ಟವಾಗುವ ಮಾತುಗಳು ನಷ್ಟವಾಗಲಿ, ಯಾರೂ ವ್ಯಥೆ ಪಡಬೇಕಾಗಿಲ್ಲ.

ಈ ರೀತಿ ನಾಡ ಜಾಣರು ಮೆದುಳ ಹೊಳೆ ಹರಿಯ ಬಿಡಿಸಿದರೆ, ಸಮಿತಿ ಯವರು, ಅವರ ನಂಬುಗೆಯಿಂದ ತೊಳಲುವ ನಾಡವರ ನುಡಿಯವರ ತೊಂದ ರೆಯ ಸಾಲು ಕರಗಿ ನಾಶವಾಗುವುದು; ಅನುಮಾನ ವಿರದು.

—ರೇವಣ್ಣ.

# ಇದು ಕ್ರಿಕೆಟ್ಟೆ ?

— o —

ಅನ್ಯಾಯ, ಕ್ರಿಕೆಟ್‌ನಲ್ಲೂ ಅನ್ಯಾಯ  ಹೀಗೆ, ಹಗಲು ಹೊತ್ತಿನಲ್ಲೇ ಅನ್ಯಾಯ ನಡೆಯುತ್ತಿದ್ದರೆ, ನಾಳೆ ನಮ್ಮ ಇಂಡಿಯಾದಲ್ಲಿ ಬೀರಾಧಿವೀರರು ಹುಟ್ಟುವುದು ಹೇಗೆ? ವೆಸ್ಟ್ ಇಂಡೀಸು. ಇಂಗ್ಲಂಡು, ಆಸ್ಟ್ರೇಲಿಯಾ ಈ ದೇಶಗಳ ಬೀರಾಧಿವೀರರನ್ನು ನಾಳೆ ನಮ್ಮ ದೇಶದ ಕ್ರಿಕೆಟ್‌ನವರು ಸೋಲಿಸುವುದು ಹೇಗೆ? ನನ್ನಂಥ ಹುರುಪಿನ ಹುಡುಗರನ್ನ ಅನ್ಯಾಯವಾಗಿ ಚಿಗುರಲ್ಲೇ ಚಿಗುಟಿದರೆ, ಕ್ರೀಡಾರಂಗ ಪೀಡಾರಂಗವಾಗಿ ಪರಿಣಮಿಸುವುದಿಲ್ಲವೆ?

ಹೋದವಾರ, ಮಲ್ಲೇಶ್ವರದ ಎಂಟನೆಯ ಕ್ಲಾಸಿಗೂ ಏಳನೆಯ ಕ್ಲಾಸಿಗೂ ನಡೆದ ಮ್ಯಾಚ್‌ನಲ್ಲಿ ನನಗಾದ ಅನ್ಯಾಯವನ್ನು ಕುರಿತು ನಾನು ಹೇಳುತ್ತಿಲ್ಲ. ನಾಲ್ಕು ಕ್ಯಾಚು ನನ್ನ ಕಡೆ ಬಂತು, ಅನಿರೀಕ್ಷಿತ ಕಾರಣಗಳಿಂದಾಗಿ ಬಿಟ್ಟೆ, ನಾಲ್ಕನ್ನೂ ವೆ. ಅದಕ್ಕಾಗಿ ನನ್ನ ಮೇಲೆ ಆ ಹಾಳು ಕ್ಯಾಪ್ಟನ್ನು ರೇಗಿದ, ಹೊಡೆಯುವುದಕ್ಕೇ ಬಂದ. ಆದರೆ, ನನ್ನ ಕಣ್ಣಿಗೆ ಸರಿಯಾಗಿ ಬಿಸಿಲು ಬಡಿಯುತ್ತಿತ್ತು, ಬೇರೆ ಯಾವುದಾದರೂ ಪೊಸಿಷನ್ನಿನಲ್ಲಿ ನನ್ನನ್ನು ನಿಲ್ಲಿಸಿದ್ದರೆ ನಾನು ಖಂಡಿತ ನಾಲ್ಕನ್ನೂ ಹಿಡಿಯುತ್ತಿದ್ದೆ ಅಂತ, ಎಷ್ಟು ಹೇಳಿದರೂ, ಆ ಕ್ಯಾಪ್ಟನ್ ಕಿವಿಗೆ ಹಾಕಿಕೊಂಡರೆ ತಾನೆ? ಅದರ ವಿಷಯ ಹೋಗಲಿ.

ಮೊನ್ನೆ, ಸ್ಕೂಲಿಗೆ ಹೋದಮೇಲೆ ಸ್ಕೂಲಿಲ್ಲ ಅಂದರಲ್ಲಾ, ರಜ ಕೊಟ್ಟರಲ್ಲಾ, ಸೂರ್ಯಗ್ರಹಣಕ್ಕೆ ಅಂತ ಕಾಣದೆ ಇದ್ದ ಸೂರ್ಯಗ್ರಹಣಕ್ಕೆ, ಅವತ್ತು ಐದನೆಯ ಫಾರಂಗೂ ನಾಲ್ಕನೆಯ ಫಾರಂಗೂ ಆಯಿತಲ್ಲಾ, ಭಾರಿ ಮ್ಯಾಚು, ಮೂರು ಸೇರು ಕಡಲೆಕಾಯಿಯದು, ಅದನ್ನೇ ನಾನು ಹೇಳುತ್ತಿರುವುದು. ಅದರ ಸ್ಕೋರ್ ನೋಡಿದಿರೇನು, ನೀವು? ನನ್ನ ರನ್ನು, ಸೊನ್ನೆಯಂತೆ, ಬರೆದುಕೊಂಡಿದಾರೆ, ಪುಸ್ತಕದಲ್ಲಿ. ಅನ್ಯಾಯ, ಅಕ್ಷಮ್ಯ  ಕೇಳುವವರೇ ಇಲ್ಲದಾಗಿದೆ. ಯಾವ ಮಂತ್ರಿ ಗೆದ್ದು ಬಂದು, ಯಾರ ತಲೆ ಮೇಲೆ ಕೂತರೂ, ಈ ಅನ್ಯಾಯ ತೊಲಗುವುದಿಲ್ಲವಲ್ಲಾ ನಮ್ಮ ದೇಶದಿಂದ!

ಅವತ್ತು, ನಾನು ಸೆಂಚುರಿ ಹೊಡೆಯಬೇಕು ಅಂತ ನಿಶ್ಚಯಿಸಿ, ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡಿದ್ದೆ. ಬಿಳಿ ಷರಾಯಿ ಎರವಲು ತಂದಿದ್ದೆ;

ಬೆಡ್ಡಿಂಗ್ ಕಟ್ಟುವ ಹಗ್ಗಾನ ಬೆಲ್ಟಾಗಿ ಬಿಗಿದಿದ್ದೆ. ಹೈಸ್ಕೂಲ್ ಹರಾಜಿನ ಬ್ಯಾಟು, ನನ್ನದೇ, ಅದಕ್ಕೆ ಹರಳೆಣ್ಣೆ ಹಚ್ಚಿ ತಂದಿದ್ದೆ. ಫೀಲ್ಡಿಗೆ ಬರೋ ದಾರೀಲಿ, ಆಂಜನೇಯನ ಗುಡಿಗೆ ಹೋಗಿ, ಕಂಬಿ ಸಂದಿನಿಂದ, ಒಳಕ್ಕೆ ಒಂದು ಹೂ ಎಸೆದಿದ್ದೆ, ಪಕ್ಕದ ಮನೆ ತೋಟದಿಂದ ಕಿತ್ತದ್ದು, ಗುಲಾಬಿ.

ನಮ್ಮ ಕ್ಯಾಪ್ಟನ್, ಒಬ್ಬ ಕುಂಟ; ಕುಹಕಿ; ಹೊಟ್ಟೆಕಿಚ್ಚಿನ ಗೂಡು. ಮೊದಲು ನನ್ನನ್ನ ಕಳುಹಿಸಲಿಲ್ಲ, ಅವನು, ನಡುವೇನೂ ನೂಕಲಿಲ್ಲ; ಕಡೇಗೆ ತಳ್ಳಿದ .. ಕಟ್ಟ ಕಡೇಗೆ, ಕಟ್ಟಿಗೆ ಹಿಡಿದು, ಹೊರಟೆ. ಸರಿ! ಅದೂ ಒಂದು ವರಸೆ, ಕೊನೇ ಜೊತೆಯ ಸಂಚುರಿ ಅಂತ ಪೇಪರಿನವರು ಅಚ್ಚು ಹಾಕಿಸಲಿ, ಅಂತ ನಿಂತುಕೊಂಡೆ, ನೆಲ ದಮ್ಮಾಸ್ ಮಾಡುತ್ತಾ.

ಮೊದಲನೆಯ ಚೆಂಡು ಬಂತು....ಮೊನ್ನೆ ಗ್ರೇವ್‌ನಿ ಬಂದಿದ್ದಾಗ, ನೋಡಿದ್ದೆ. ಮೊದಲನೆಯ ಚೆಂಡನ್ನ ಹೊಡೆಯಬೇಕಾದರೆ, ಅಷ್ಟು ಬಿರುಸು ಕೂಡದು, ಅಷ್ಟು ಗಾಬರೀನೂ ಕೂಡದು. ಮೆತ್ತಗೆ ಕುಟ್ಟಲೂ ಬೇಕು; ಕೊಂಚ ಎತ್ತಿ ಬಾರಿಸಲೂ ಬೇಕು. ಬೌಂಡರಿ ಬೇಡ, ಎರಡು ರನ್ನಾದರೂ ಸಂಪಾದಿಸ ಬೇಕು, ಅಂಥ ಹೊಡೆತ, ಅವನದು....ಅಂಥ ಒಂದು ಏಟು ಬಿಟ್ಟೆ; ಚೆಂಡು ಬ್ಯಾಟಿಗೆ ತಗುಲಿ, ಮಿಡ್ ಆಫ್‌ನ ಹುಡುಕಿಕೊಂಡು ಹೋಯಿತು. " ಬಾರೋ " ಅಂದೆ ನನ್ನ ಗೆಳೆಯ, ಅತ್ತಕಡೆ ಧಾಂಡಿಗ, ಅಯ್ಯಂಗಾರೀಗೆ.

ಅವನೊಬ್ಬ ದಡ್ಡ ; ಎಲ್ಲೋ ಪುಳಿಯೋಗರೆ ನೆನೆದುಕೊಂಡು ನಿಂತಿದ್ದ. ಬೇಡ, ಬೇಡ, ಅಲ್ಲೇ ಇರು" ಅಂತ ಕೂಗಿದ. ಆದರೆ, ಅಷ್ಟು ಹೊತ್ತಿಗೆ, ನಾನೊಂದು ರನ್ ಪೂರೈಸಿ, ಅವನ ಹತ್ತಿರಕ್ಕೆ ಹೋಗಿ ಬಿಟ್ಟಿದ್ದೆ. " ಓಡೋ, ಲೋ " ಅಂತ ಅಂಗಲಾಚಿದೆ. ಅವನು ಅಲ್ಲಾಡಲೇ ಇಲ್ಲ .. ಸರಿ. ನಾನೇ ಹಿಂದಕ್ಕೆ ಇನ್ನೊಂದು ರನ್ ಓಡಿದೆ ಲೆಕ್ಕಕ್ಕಿಲ್ಲದೆ ಎರಡು ರನ್ ಅನ್ಯಾಯವಾಗಿ ಹೋಯ್ತು.

ಅಷ್ಟು ಹೊತ್ತಿಗೇನಾಗಿದೆ!... ಒಳ್ಳೆ ಗುಲ್‌ಷನ್‌ಗಳು ನಮ್ಮ ಎದುರು ಟೀಮಿನವರು. ಚೆಂಡನ್ನೆಸದ, ಒಬ್ಬ ಪೆದ್ದ, ವಿಕೆಟ್ ಮೇಲೆ, ಜೋರಾಗಿ.... ಮೇಲೆ, ಅಲ್ಲ, ಹತ್ತಿರ....ಅದನ್ನ ಹಿಡಿಯಲೂ ಇಲ್ಲ, ತಡೆಯಲೂ ಇಲ್ಲ, ಕೀಪರ್ ಮಹರಾಯ. ಹೋಯಿತು, ಅದು ಇನ್ನೊಂದು ಮೂಲೆ ಹಿಡಿದು ಕೊಂಡು.

" ಬಾರೋ " ಅಂದೆ, ಓಡುತ್ತ, ಅಯ್ಯಂಗಾರೀನ, ಅವನು ಅಂಪೈರ ಹತ್ತಿರ ಏನೋ ಮಾತಾಡುತ್ತಿದ್ದ, ಕಿವೀನೇ ಕೇಳಿಸಲಿಲ್ಲ, ಅಲ್ಲೇ ಬೇರು ಬಿಟ್ಟ.

ಸರಿ ಇನ್ನೆರಡು ರನ್ ದಂಡ ಓಡಿದೆ ಕಡೆಗೆ, ಆ ಚೆಂಡನ್ನು ಹಿಡಿದು ನಿಲ್ಲಿಸಿದ ಆಸಾಮಿ, ಬೌಲರ್ ಕಾಲು ಸಂದಿನಿಂದ ಅದನ್ನ ಉರುಳಿಸಿದ, ಜೋರಾಗಿ ನಮ್ಮ ವಿಕೆಟ್‌ಕಡೆ. ಕೀಪರ್ ಕೈಗೆ ಸಿಕ್ಕದೆ, ಅದೂ ಮತ್ತೆ ಆಚೆ ಮೂಲೆಗೆ ಹೋಯಿತು "ಕವರ್" ಉ ಡೀಲಾನೇ. ಐದನೆಯ ರನ್ ಓಡೋಣ ಅಂತ ಒಂದು ಗಾಲಿಟ್ಟೆ; ಮುಗ್ಗರಿಸಿ ಬಿದ್ದೆ. ಏಳುತ್ತೇನೆ, ಅಯ್ಯಂಗಾರಿ ನನ್ನ ಪಕ್ಕ ದಲ್ಲೇ ನಿಂತಿದಾನೆ.

ಇನ್ನೇನು ಮಾಡುವುದು? ಆ ರನ್ನನ್ನ ನಾವಿಬ್ಬರೂ ಭುಜಕ್ಕೆ ಭುಜ ಕೊಟ್ಟು, ಅಯ್ಯಂಗಾರಿ ವಿಕೆಟ್ ಕಡೆ, ಸಾರೋಟಿನ ಕುದುರೆಗಳ ಹಾಗೆ ಓಡಿ ಮುಗಿಸಿದೆವು. ನಾನು ಹೇಳಿದೆ, ಅಯ್ಯಂಗಾರಿಗೆ "ಲೋ! ಸುಸ್ತು! ನೀನೇ ಓಡು, ಆಕಡೆಗೆ, ನಾನಿಲ್ಲೇ ಇರ ತ್ತೇನೆ" ಅಂತ. ಚಂಡಾಳ, ಊ ಹೂ., ಅಂದೇ ಬಿಟ್ಟ. ಸಂಸ್ಕೃತದಲ್ಲಿ ಏನೇನೋ ಅಂದ, ಬೈಗಳಲ್ಲ ಅಂದು ಕೊಂಡೆ.

ನಾನೇ ಓಡಿದೆ, ಆರನೆಯದನ್ನ. ಪಿಚ್ ಯಾಕೋ ಬಹಳ ಬೇಗ ಡಬ್ಬಲ್ ಉದ್ದವಾಯಿತು ಅಂತ ತೋರುತ್ತೆ ಕಾಲುಗಳು ಸಾಕು, ಎಂದುವು ತೊಡೆಗಳೆರಡೂ, ದೂರನೋಡಿ, ನಡ ಗಿದುವು. ನಾಲಗೆ, ನೀರು ಕೊಡೋ ಎಂದಿತು ಸಾಲ ತಂದ ಷರಾಯಿ ಕೆಳಕ್ಕಿಳಿದು ಹಿಂಗಾಲು ಮುಂಗಾಲನ್ನು ಮುಚ್ಚಿ ಟಾಂಗ್ ಕೊಟ್ಟುವು. ಬೆಲ್ಟಿಂಗ್ ಹಗ್ಗ ಸಡಿಲವಾಯಿತು, ಅರ್ಧ ದಾರೀಲೇ ಬ್ಯಾಟನ್ನೆಸೆದು, ಷರಾಯನ್ನು ಎರಡು ಕೈಗಳಿಂದಲೂ ಮೇಲೆತ್ತಿ ಹಿಡಿದು ಓಡಿದೆ.

ಕೊಂಚ ತಡವೇ ಆಯಿತು. ಡೀಪ್ ಎಕ್ಸ್‌ಟ್ರಾ ಚೆಂಡನ್ನೆಸೆದ, ಕೀಪರ್ ಸ್ಟಂಪನ್ನು ಹಾರಿಸಿದ.–ಮಾಡ ಬೇಕಾದದ್ದೇ; ಅವರವರ ಕರ್ತವ್ಯ ಅವರವರಿಗೆ.

ನಾನೂ ಅಯ್ಯಂಗಾರೀನೂ ಎದುರು ಬದರಾಗಿ ಓಡಿಲ್ಲವಾದ್ದರಿಂದ, ಆರು ರನ್ನು ಓಡಿದರೂ, ಲೆಕ್ಕಕ್ಕೆ ಮಾತ್ರ ನನ್ನದು, "ಸೊನ್ನೆ" ಅಂತ ಬರೆದುಕೊಂಡೇ ಬಿಟ್ಟರು.

ಅನ್ಯಾಯ! ...ಆದರೆ, ಒಂದು ವಿಷಯ ಕ್ರಿಕೆಟ್‌ನ ಇತಿಹಾಸದಲ್ಲೇ ಇದುವರೆಗೂ ಇಂಥ ಒಂದು ಘಟನೆ ಸಂಭವಿಸಿಲ್ಲ. ಆದ್ದರಿಂದ, ನನ್ನ ಈ "ಆರು ರನ್ನು—ಸೊನ್ನೆ" ಅಖಿಲ ಜಗತ್ಪ್ರಕಾಡರ್ಾಗಿ ಎಂದೆಂದೂ ಮೆರೆಯುತ ದೆಯಲ್ಲವೆ, ತಿಳಿಸಿ

—ಪುಟ್ಟಪಾಪು.

——— o ———

# ನೆರೆಹೊರ್ಕೆ

ಗೋಳೂರು

ತಾ||...............

ಶ್ರೀ ಚಿದಂಬರಯ್ಯನವರಿಗೆ—

ನಿಮಗೆ ಮನೆ ಬಾಡಿಗೆಗೆ ಕೊಟ್ಟಿರುವ ಮಾಲೀಕ ಮಹದೇವಯ್ಯನು ಬರೆಯುವುದೇನಂದರೆ .. ಏನೇ ಬರೆದರೂ ನಿಮಗೆ ಆಶ್ಚರ್ಯ. ನಿಜ... ಈ ಹಿಂದೆ ಆ ಮನೆಯಲ್ಲಿದ್ದ ಮಾರ್ಕಂಡೇಯನೂ ಹೀಗೇ ಚಕಿತನಾಗಿದ್ದ. ಪಕ್ಕದ ಮನೆಯಲ್ಲಿದ್ದರೂ ಮಾರುದ್ದಾ ಪತ್ರವೇಕೆ? ಎಂದು ನೀವು ಮೂಗು ಮುರಿಯಬಹುದು. ಆದರೆ ಮಾತಿಗಿಂತ ಮಸಿ ಬಹಳ ಮೊನೆಚಾದುದೆಂದು ಮನದಟ್ಟು ಮಾಡಿಕೊಂಡಿರುವ ಮನೆ ಮಾಲೀಕ ಈ ಮಹದೇವಯ್ಯ—ಆದಾಗಿ ಉಭಯ ಕಲಹೋಪರಿ ಸಾಂಪ್ರತ ಹೆಚ್ಚು ಬರೆದರೆ ಮಸಿ ದಂಡ—ಓದಲು ನಿಮ್ಮ ಕನ್ನಡಕದ ಗಾಜಿನ ಪವರ್ ದಂಡ....ಈ ಕೆಳಗೆ ಸೂಚಿಸುವ ವಿಷಯಗಳ ಕಡೆ ಗಮನವಿತ್ತು ನೀವು ಅಲ್ಲೇ ಇನ್ನೂ ಅನೇಕ ದಿನಗಳಿರುವುದಕ್ಕೆ ಅವಕಾಶ ಕಲ್ಪಿಸಿಕೊಳ್ಳಿ.

ನಿಮ್ಮ ಅಜ್ಜಿಯ ಮಂಚವನ್ನು ಈಗಿರುವ ಕೊಠಡಿಯಿಂದ ಬೇರೇಕಡೆ ರವಾನಿಸಿದರೆ ನನ್ನ ಮಗಳ ಸಂಗೀತ ಪಾಠ ಸಾಂಗವಾಗಿ ನಡೆದೀತು. ಆ ಮುದುಕಿಯ ಕೆಮ್ಮಿನ ಕೆನೆತ ಅತಿ ಘೋರವಾಗಿದೆ—ಅದರ ದೆಸೆಯಿಂದಾಗಿ ಅನೇಕ ವೇಳೆ ಸಂಗೀತ ಮೇಸ್ಟ್ರೇ ತಾಳ ತಪ್ಪುವಲ್ಲಿ ಇನ್ನು ಕೇವಲ ಬಾಲಕಿಯ ಪಾಡೇನು?—ಅವರ ಮಂಚವನ್ನು ಬದಲಾಯಿಸಿ ಕನ್ಯಾ ಪರೀಕ್ಷೆಗೆ ತರಪೀತಾಗುತ್ತಿರುವ ಬಾಲಕಿಯು ಬರುವ ವರಗಳನ್ನು ಎದುರಿಸುವಂತೆ ಮಾಡಬಹುದು.

ಎರಡನೆಯದಾಗಿ ನಾವು ನಿಮಗೆ ಮನೆಯನ್ನು ಮಾತ್ರ ಬಾಡಿಗೆಗೆ ಕೊಡುವಂಥವರಾಗಿರುತ್ತೇವೆ—ಭಾವಿಗೆ ಹಾಕಿರುವ ಹಗ್ಗವನ್ನೂ ಅಲ್ಲ—ಆದ್ದರಿಂದ ತಮ್ಮ ಹಗ್ಗದ ವ್ಯವಸ್ಥೆ ತಾವೇ ಮಾಡಿಕೊಳ್ಳಲಾರಿರಾ ?

ಈ ಎರಡು ಅಂಶಗಳು ನಮ್ಮ ಗಮನಕ್ಕೆ ಬಂದಿದೆ—ಸರಿಪಡಿಸಿಕೊಂಡು ಮನೆ ಮಾಲೀಕ ಮಹದೇವಯ್ಯನ ಪ್ರೀತಿಗೆ ಪಾತ್ರರಾಗುವಿರೆಂದು ತಿಳಿಯುವೆ.

ಇತಿ ತಮ್ಮ

ಮಾಲೀಕ ಮಹದೇವಯ್ಯ.

ಎಲೈ ಮಹದೇವ—

ನಿನ್ನ ಟೀಕಾತ್ಮಕ ಚೀಟಿ ಕೈಸೇರಿತು. ಇಂದಿನ ನಮ್ಮ ಸ್ವತಂತ್ರ್ಯಯುಗದಲ್ಲಿ ನಾವು ನಾವು ನನು ನಮಗೆ ತೋರಿದಂತೆ ವರ್ಣಿಸಲು ಸರ್ವತಂತ್ರ ಸ್ವತಂತ್ರರು—ಆದರೂ ನಿನ್ನ ಚತುರವಕ್ಕಣೆಯ ವೈಖರಿ ಕಂಡು ಮೈ ಕೆಂಡವಾಗಿದೆ. ನಮ್ಮನ್ನು ಸ್ವತಂತ್ರವಿಲ್ಲದ ಪರತಂತ್ರನನ್ನಾಗಿ ಅತಂತ್ರರನ್ನಾಗಿ ಮಾಡಲು ಹೂಡಿರುವ ನಿನ್ನ ತಂತ್ರ ಸಾಕು—ಕೇವಲ ಕಂತ್ರಿಯ ಹಾಗೆ ಆಡಬೇಡ. ಬಾಡಿಗೆ ಕೊಟ್ಟ ಮೇಲೆ ಮನೆಯ ಮಾಲೀಕ ನಾನೇ—ನೀನಲ್ಲ. ರಸೀದಿ ಸ್ಟಾಂಪಿನ ಮೇಲೆ ನಿನ್ನ ಎಡಗೈಗುರುತು ಬಿದ್ದ ಮೇಲೆ ಈ ಮನೆಯ ಮೇಲೆ ನಿನಗೂ ನಿನ್ನ ಗೂನು ಬೆನ್ನಿಗೂ ಯಾವ ಹಕ್ಕೂ ಇಲ್ಲ. ಅರ್ಥವೆ? ಪತ್ರದುದ್ದಕ್ಕೂ ನೀವು ನಾವು ಎಂದು ವೃಥಾ ಬಹುವಚನವನ್ನು ವ್ಯರ್ಥ ಮಾಡಿರುವೆ. ಯಾವ ವಿಷಯಕ್ಕೂ ಏಕವಚನವೇ ಚೆನ್ನು. ಈ ಪತ್ರಕ್ಕೆ ನೀನು ಏಕ ವಚನದಲ್ಲೇ ಉತ್ತರಿಸು—ಇನ್ನು ನಿನ್ನ ಎರಡು ಟೀಕೆಗಳಿಗೆ ಇದೋ ನನ್ನ ಉತ್ತರ—ರಾಮಬಾಣ—ಮೊದಲನೆಯದಾಗಿ—ಈ ಮನೆಗೆ ಬಂದಾಗ ಅಜ್ಜಿಯನ್ನು ನೀನು ಸೂಚಿಸಿದ ಕೊಠಡಿಯಲ್ಲೇ ಮಲಗಿಸಿದ್ದೆ—ನಿನ್ನ ಮಗಳ ಸಾಪಾಸಾ ಸಂಗೀತ ಶುರುವಾದೊಡನೆ ನಮ್ಮ ನಾಯಿ ಮುಖಮೇಲೆ ಮಾಡಿ ಅದರದೇ-ಆದ ಪ್ರತ್ಯೇಕ ಉಚ್ಛಸ್ವರದಲ್ಲಿ ಮುಗಿಲತ್ತ ಮೂತಿ ಮಾಡಿ ಕೇಕೆಹಾಕ ತೊಡಗಿತು. ಅಜ್ಜಿಯನ್ನು ಪ್ರಕೃತ ಹಾಲಿ ನೀನು ಹೇಳಿದ ರೂಮಿಗೆ ಬದಲಾಯಿಸಿದ್ದರಿಂದ ಅಜ್ಜಿಯ / ಕೆಮ್ಮಿನ ಕೆನತದಲ್ಲಿ ನಿನ್ನ ಮಗಳ ಮೊರೆತ ಮುಚ್ಚಿ ಹೋಗುವುದರಿಂದ ಮನೆಯಲ್ಲಿ ನೆಮ್ಮದಿಮೂಡದೆ—ನಾಯಿಯ ಕೇಕೆ ನಿಂತಿದೆ. —ನೀನೇನೇ ಹೇಳು ನಿನ್ನ ಮಗಳ ಸ ಸ ರಿ ರಿ ಯ ಜಂಟಿ ಸ್ವರಕ್ಕಿಂತ ಅಜ್ಜಿಯ ಕೆಮ್ಮಿನ ಕೆನತ ಎಷ್ಟೋ ಇಂಪು, ಎಂದೇ ಈ ಏರ್ಪಾಡು-ಅರ್ಥವೆ?

ಎರಡನೆಯದಾಗಿ – ಎಲೇ ಮಾಲೀಕ ಮಹದೇವ – ಭಾವಿಮೇಲಿನ ಹಗ್ಗದ ಮಾಲೀಕತ್ವವನ್ನೂ ನೀನು ವಹಿಸಿದ್ದು ನನಗೆ ಮಹದಾಶ್ಚರ್ಯವಾಗಿದೆ. ಯಾಕೆಂದರೆ—ತಿಪಟೂರಿನಿಂದ ಬಂದ ನಮ್ಮ ತೆಂಗಿನಕಾಯಿ ಬಲ್ಲೆಯಾ? ಅದರ ಜುಂಗೆಲ್ಲ ತೆಗೆದು ಜೋಡಿಸಿ ಮೂಲೆಗೊಟ್ಟದ್ದು ನೆನಪುಂಟೆ? ಆ ಜುಂಗು ಕೊರವನೊಬ್ಬನಿಂದ ಕಳವಾದದ್ದು ನಿನಗೆ ತಿಳಿಯದೆ? ಅದೇ ಕೊರವ ಅದೇ ಜುಂಗಿನಿಂದ ಹೊಸೆದ ಹಗ್ಗ ನಿಮಗೆ ಮಾರಿದ್ದು ನಮ್ಮ ಮೀನಾಕ್ಷಿ ಕಣ್ಣಾರೆ ಕಂಡಿದ್ದಾಳೆ—ಅಂದಮೇಲೆ ಆ ಹಗ್ಗ ನಮ್ಮದೊ ನಿಮ್ಮದೊ? ನೀನೇ ಹೇಳು ಮಹದೇವ—ವೃಥಾ ಹಗ್ಗದ ವೆಸೆಯಿಂದ ನನಗೂ ನಿನಗೂ ಹಣಾಹಣೆ ಬೇಡ —ಅಯ್ಯಾ ಮಹದೇವ ನಿನ್ನ ಅಪಾದನೆಗಳು ಹುರುಳಿಲ್ಲವೆಂದು ಅರ್ಥವಾಯಿತೆ?

ಇತಿ

ಚಿದಂಬರಯ್ಯ

ಗೋಳೂರು.

ತಾ|| ......................

ಎಲ್ಲೈ ಚಿದಂಬರ—

ನಿನ್ನ ಇಚ್ಛೆಯಂತೆ ಏಕ ವಚನವನ್ನೇ ಉಪಯೋಗಿಸಿದ್ದೇನೆ. ಹೀಗೆ ಮಾಡಿದ್ದು ನಿನ್ನ ಯೋಗ್ಯತೆಯ ಮಟ್ಟ ತೋರಿಸುತ್ತದಲ್ಲದೆ ಇನ್ನೇನೂ ಅಲ್ಲ. ನಿನ್ನ ವಿಚಿತ್ರವಾದ ನೋಡಿದರೆ ನೀನು ಪೂರ್ವದಲ್ಲಿ ಲಾಯರ ಗುಮಾಸ್ತನಾಗಿದ್ದು ಆ ಮೇಲೆ ಫೂಟ್ ಲಾಯರಾಗಿ ಈ ಸ್ಥಿತಿಗೆ ಬಂದಿರಬೇಕು. ಹೂಂ-ಅದೆಲ್ಲಾ ನನಗೇಕೆ? ನಾವು ನೀವು ಹೊಂದಿಕೆಯಿಂದ ಇರಬೇಕಾದ್ದು ಮುಖ್ಯ. ಈ ಹಿಂದೆ ಅಲ್ಲಿದ್ದವರೂ ಮೊಂಡರು. ಅವರೂ ನನ್ನ ಗೂನು ಕಂಡು ಕುಕ್ಕಿದ್ದರು. ಕಡೆಗೆ ನಮ್ಮ ಪೈ|| ಅನುಕೂಲ್‌ಸಿಂಗನೆ ಬರಬೇಕಾಯಿತು. ಎಲ್ಲಾ ಅವರವರ ಕರ್ಮ. ನಿಮ್ಮ ಹಣೆ ಬರಹದ ಲಿಪಿ ನಾನು ಬಲ್ಲೆನೆ?—ನಾನು ನಮ್ಮ ಹುಡುಗಿ ಸಂಗೀತ ಪಾಠ ಈ ಕೊಠಡಿಯಿಂದ ಗ್ಯಾರೇಜಿಗೆ ಬದಲಾಯಿಸಿದ್ದೇನೆ. ಆದ್ದರಿಂದ ನಿಮ್ಮಜ್ಜಿಯನ್ನೂ ದಯವಿಟ್ಟು ಬದಲಾಯಿಸಿ, ನಮಗೆ ನಿದ್ರೆ ದಯಪಾಲಿಸಬೇಕೆಂದು ಬೇಡುವ.

ವಿಶ್ವಾಸವಿರಲಿ

—ಮ. ಮಹದೇವ

ವಿ. ಸೂ: ಹಗ್ಗದ ವಿಷಯ ವಾದಿಸಲಾರೆ. ಆದರೂ ಹಣಕೊಟ್ಟ ಮೋಹ ಅದರ ಮಾಲೀತತ್ವವನ್ನು ನನಗೇ ಅಂಟಿಸದೆ. ನೀವೂ ಉಪಯೋಗಿಸಿ ಪರವಾಗಿಲ್ಲ.

ಗೋಳೂರು

ತಾ|| ........... ....

ಮಹದೇವನಿಗೆ—

ಚಿದಂಬರನು ಬರೆಯುವುದೇನೆಂದರೆ- ಈ ಕೂಡಲೆ ನಮಗೆ ಕಟ್ಟಿಗೆ ಹಾಕಲು ಜಾಗಾ ಏರ್ಪಡಿಸಿಕೊಡಿ. ನಾನು ಲಾಯರ ಗುಮಾಸ್ತನಾದದ್ದರ ವಿಷಯ ನನ್ನ ಫೂಟು ಲಾಯರಗಿರಿ ನಿನಗೆ ಬೇಡ. ನಾನೂ ಪೈ|| ವಿರೋಚನ ಮಿತ್ರನೆಂದು ಮಾತ್ರ ಹೇಳ ಬಯಸುತ್ತೇನೆ. ಪೈ|| ಅನುಕೂಲ್‌ಸಿಂಗನಿಗೂ ನಮ್ಮ ಪೈ|| ವಿಠ್ಠೂವಿಗೂ ನಡೆದ ಕುಸ್ತಿಯಲ್ಲಿ ನಿಮ್ಮ ಸಿಂಗು ಮಂಗನಾದದ್ದು ನೆನಪಿರಲಿ. ವಿಠ್ಠೂನ ಎದೆ ಅಗಲ ನಲವತ್ತೆರಡು ತೂಕ ನೂರಾತೊಂಬತ್ತು, ಮತ್ತೆ ಮತ್ತೆ ಇಂಗು ತಿನ್ನುವುದು ಬೇಡ.

ನೀನು ನನ್ನ ಯೋಗ್ಯತೆಯ ವಿಷಯ ಬರೆದದ್ದು ಕೂಡಲೆ ವಾಪಸು ತೆಗೆದುಕೊ. ಸ್ವತಂತ್ರ ಭಾರತದಲ್ಲಿ ಪ್ರತಿ ಪ್ರಜೆಯೂ ತನಗೆ ತಾನೂ ಸ್ವತಂತ್ರನೆಂದು ತಿಳಿ. ನಿನ್ನ ಯೋಗ್ಯತೆ ನೀನು ತಿಳಿದಿಕೊ.

ನಿನ್ನವ
ಚಿದಂಬರ

ವಿ. ಸೂ: ಎರಡಾಣೆ ಖರ್ಚು ಮಾಡಿ ಕಾಗದ ಪೋಸ್ಟಿನಲ್ಲಿ ಕಳಿಸಿದರೆ ತಡವೂ ತಡ ದುಡ್ಡೂ ದಂಡ ಆದ್ದರಿಂದ ನಾನೇ ಮನೆಯ ಅಂಗಳದಲ್ಲಿ ನಿಂತಾಗ ಕಾಗದ ಕೈಗೇ ಕೊಡು ಆ ಎರಡಾಣೆಯನ್ನೂ ನನಗೆ ಕೊಟ್ಟರೆ ಬೇಗ ಓದಿ ಉತ್ತರ ಬರೆಯುವುದಕ್ಕೆ ಹುಮ್ಮಸ್ಸು ಬರುತ್ತೆ.

ಇತಿ
ಚಿದಂಬರ

ಗೋಳೂರು.
ತಾ|| .... .............. ...

ಸ್ವಾಮೀ ಚಿದಂಬರರೇ—

ದಯವಿಟ್ಟು ಬಾಡಿಗೆ ಕಳಿಸಿ ಕೊಡಿ—ಆದಷ್ಟು ಬೇಗ ಮನೆ ಬಿಟ್ಟುಬಿಡಿ. ಹಳೇ ಬಾಡಿಗೆ ಇನ್ನೂ ನಾಲ್ಕು ತಿಂಗಳದು ಹಾಗೇ ಇದೆ ನಮಗೂ ನಿಮಗೂ ವಾದವೇಕೆ. ನೀವೇ ಹೇಳಿದಂತೆ ಸ್ವತಂತ್ರರಾಗಿ ಇರೋಣ. ಕಟ್ಟಿಗೆ ಹಾಕಲು ನಮ್ಮ ಜಗುಲಿ ಉಪಯೋಗಿಸಬೇಡಿ.

ತಮ್ಮ ವಿಧೇಯ
ಮಹದೇವ.

ಗೋಳೂರು.
ತಾ||...... .............. ...

ಮಹದೇವಯ್ಯನವರಿಗೆ—

ಚಿದಂಬರನ ಪತ್ರವೇನಂದರೆ—ನೀವು ನಾಲ್ಕು ತಿಂಗಳ ಬಾಡಿಗೆ ಕೇಳುತ್ತಿರುವುದು ಕಂಡು ಆಚ್ಚರಿಯಾಗಿ—ಕೂಡಲೇ ಸಹಾಯುಕ್ಕಿರಲೆಂದು ಪೈ|| ವಿಠ್ಠಗೆ ಹೇಳಿ ಕಳಿಸಿದೆ. ನಿಮ್ಮ ಮಗಳ ಸಂಗೀತದಿಂದ ಅಜ್ಜಿಯ ಕೆಮ್ಮು ಮುಮ್ಮಡಿಸಿದ್ದು ಬರೆದಿರಲಿಲ್ಲವೆ? ಇದನ್ನು ಒಪ್ಪಿ ನೀವು ನಿಮ್ಮ ಮಗಳನ್ನು ಗ್ಯಾರೇಜಿಗೆ ಸಾಗಿಸಿದಿರಿ. ಮುಮ್ಮಡಿಸಿದ ಖಾಯಿಲೆಗೆ ನಿಮ್ಮ ಮಗಳ ಸಂಗೀತವೇ ಕಾರಣವಾದಮೇಲೆ ಅದರ ಮದ್ದಿಗೆ ಡಾಕ್ಟರ ಬಾಯಿಗೆ ಸುರಿದ ಖರ್ಚು ನೀವಲ್ಲದೆ ನಾವು ವಹಿಸೋಣವೆ? ಚೆನ್ನಾಗಿದೆ ನೀವು ಹೇಳೋದು. ಡಾಕ್ಟರ ಬಿಲ್ಲು

೧೧೧ ರೂಪಾಯಿ ಆಗಿತ್ತು—ಮುಂದಿನ ತಿಂಗಳು ಕಳೆದರೆ ನೀವೇ ಹನ್ನೊಂದು ರೂಪಾಯಿ ಕೊಡಬೇಕಾಗುತ್ತೆ—ಅದನ್ನು ಮುಂದೆ ನಮ್ಮ ಬಾಡಿಗೆಯಲ್ಲಿ ವಜಾ ಹಾಕಿ ಸರಿಮಾಡಿಕೊಳ್ಳೋಣ ನೆರೆಹೊರ್ಕೆ ಎಂದರೆ ಇಷ್ಟೂ ಬೇಡವೆ? ನಮಸ್ಕಾರ—

ಇತಿ ನಿನ್ನ ಮ
ಚಿದಂಬರ.

ಗೋಳೂರು
ತಾ|| . ............ .....

ಸ್ವಾಮಿ ಚಿದಂಬರರೆ—

ಸಾಷ್ಟಾಂಗ ನಮಸ್ಕಾರಗಳು ಕೂಡಲೆ ನಮ್ಮ ಅಂಗಳದಲ್ಲಿ ಹರಡಿರ ವ ನಿಮ್ಮ ಬೆರಣಿ ತೆಗಿಸಿ-ಕಟ್ಟಿಗೆ ಹಾಗೇ ಇವೆ. ನಿಮ್ಮನೆ ರೇಡಿಯೋ ಮುಂದಿನ ಕೋಣೆಯಿಂದ ಸಾಗಿಸುವಿರಾ. ನಿಮ್ಮನ್ನು ಹೀಗೇ ಬಿಡುತ್ತಾಹೋದರೆ ಕಡೆ ಗೊಮ್ಮೆ ಮನೆ ನಂದೇ ಎಂದರೂ ಎನ್ನಬಹುದು ಎಂಬ ಚಿಂತೆ ಚಿದಂಬರ ಸ್ವಾಮಿಯೇ .. ಮಕ್ಕಳಂದಿಗನ ಮೇಲೆ ದಯವಿರಲಿ ತಾವು ಕೊಡುವ ಬಾಡಿಗೆ ಬೇಡ—ಸಧ್ಯ ಮನೆ ಬಿಡಿ ನಿಮ್ಮ ದಯದಿಂದ ನಾವು ಮಲಗಿ ಎಂಟು ದಿನ ವಾಯ್ತು—ನಮ್ಮನೆ ಹಿತ್ತಲಲ್ಲಿ ನಿಮ್ಮ ಎಮ್ಮೆ ಕಟ್ಟಬಹುದೆ? ಇದೇನು ಅನ್ಯಾಯ ....ಬಾರಿ ಬಾರಿಗೆ ಪೈ|| ವಿರ್ರ್ಮಬ ಬಂದು ಜಗುಲಿ ಮೇಲೆ ಕೂಡುವುದರಿಂದ. ಹುಡುಗರು ಊಟಮಾಡಿ ಎರಡು ದಿನವಾಯಿತು .. ತಾವು ಬೇಗ ಮನೆ ಬಿಟ್ಟರೆ ತಮಗೆ ದೇವರು ಆಯುರಾರೋಗ್ಯ ಐಶ್ವರ್ಯ ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

ವಿಶ್ವಾಸ ವಿರಲಿ ...
ಇತಿ ಸಾಷ್ಟಾಂಗ ನಮಸ್ಕಾರಗಳು
ಮ. ಮಹದೇವಯ್ಯ

ಗೂಳೂರು
ತಾ|| ....... .. ...............

ಚಿ|| ಮಾರ್ಕಂಡೇಯನಿಗೆ—

ಮಗೂ ಕ್ಷೇಮವೆ?—ಚಿದಂಬರನು ಮಾಡುವ ಆ|| ಗಳು ನೀನಿದ್ದ ಮನೆ ಬಿಡಿಸಿದ ಮಾಲೀಕನೆಂಬ ಅಹಂಭಾವವಿದ್ದ ಮಹದೇವ ಮೊನ್ನೆ ಮನೆ ಖಾಲಿಮಾಡಿ ಹೊರಟುಹೋದ—ಕೂಡಲೇ ನೀನು ಗಂಟು ಮೂಟೆ ಕಟ್ಟಿ ಕೊಂಡು ಬಂದು ಸೇರಿಕೊ. ಅವನನ್ನು ಓಡಿಸಲು ಕೊಂಚ ಶ್ರಮವೇ ಆಯಿತು—ಅಜ್ಜಿ ಕೆಮ್ಮುವ ಗ್ರಾಮಾಫೋನ್ ರಿಕಾರ್ಡನ್ನು ಹಗಲಿರುಳು ಹಾಕು

ತ್ತಿದ್ದೆ. ಈ ರಿಕಾರ್ಡನ್ನು ಮದರಾಸಿನಲ್ಲಿ ಗ್ರಾಮಾಫೋನ್ ಕಂಪನಿಲಿರೋ ನನ್ನ ಷಡ್ಡಕ ತ್ರಿವಿಕ್ರಮ ಕಳಿಸಿದ್ದ. ಕತ್ತೆಯ ಕೂಗು ನಾಯಿಯ ಕೂಗು ಇವೆಲ್ಲಾದರ ರಿಕಾರ್ಡು ಕಳಿಸಿದ್ದ ನಾಯಿಯದು ಮಾತ್ರ ಉಪಯೋಗಿಸಿದೆ. ಎಲ್ಲಕ್ಕೂ ಹೆಚ್ಚಿನ ಉಪಕಾರ ಮಾಡಿದ್ದು ಮಿತ್ರ ಪೈ|| ವಿಠ್ಠೂ ಪೈ|| ವಿಠ್ಠೂಬನೇ ಆ ಪ್ರಾಣಿ ಮಾಲೀಕ ಮಹದೇವನನ್ನು ಸ್ಟೇಷನ್ ತನಕ ಸಾಗಿಸಿ ಬಂದ. ಕೂಡಲೇ ನೀನು ಬಂದು ಮನೆ ಸೇರಿಕೊಂಡು ಬಿಡು---ಇಲ್ಲದಿದ್ದರೆ ಕಷ್ಟ—ನಾನು ಬೆಂಗಳೂರಿಗೆ ಹೋಗಬೇಕಾಗಿದೆ ಅಲ್ಲಿಂದ ನನ್ನ ಸೋದರತ್ತೆ ಮಗ ಬರೆದಿದ್ದಾನೆ---ಅವನಿಗೆ ಬಾಡಿಗೆ ಕೊಟ್ಟಿರುವವರೂ ಪಕ್ಕದಲ್ಲೇ ಇದ್ದು ಸತಾಯಿಸುತ್ತಿದ್ದಾರಂತೆ ಕೂಡಲೇ ಅವನ ಸಹಾಯಕ್ಕೆ ಹೊರಡಬೇಕಾಗಿದೆ. ಪಾಪ ಅವನೂ ಮಕ್ಕಳಂದಿಗ. ನನ್ನಿಂದ ಇಷ್ಟೂ ಸಹಾಯ ಬೇಡವೆ? ಬೆಂಗಳೂರು ನೋಡಿಲ್ಲವಂತೆ ಪೈ|| ವಿಠ್ಠೂ ಅವನಿದ್ದರೆ ಅನುಕೂಲವಲ್ಲವೆ?—ಕೂಡಲೆ ನೀನು ಬಂದುಬಿಡು. ಮನೆ ಖಾಲಿಯಾಗಿದೆ—

ಇತಿ ಆ|| ಗಳು

**ಚಿದಂಬರಯ್ಯ**

—ದಾಶರಥಿ ದೀಕ್ಷಿತ್.




ಈಕೆ—ಬೆಲ್ಲದ ಬೆಲೆ ಇಳೀತಮ್ಮ-ಸದ್ಯ ಹುರೀಟ್ಟು ಸೀಯಾಗಿ ತಿನ್ನಬಹುದು.

ಆಕೆ—ಅಯ್ಯೊ! ಬಂಗಾರದ ಬೆಲೆ ಇಳೀತಲ್ಲಮ್ಮ ಅಪ್ಪ ಕೊಟ್ಟ ೬೦೦ ರೂಪಾಯಿ—೪೦೦ಕ್ಕೆ ಇಳಿದು ಹೋಯ್ತಲ್ಲಾ?

# "ಮದುವೆಯ ಕರೆಯೋಲೆ"

## 1955 ರಲ್ಲಿ

**ಜೈ ಆಲಕ್ ನಿರಂಜನ್! ಜೈ ಬಲ ಭೀಮ್!! ಜೈ ಹನುಮಂತ್!!!**

ಬ್ರಹ್ಮಚಾರೀ ಸುಖೀ ಭವೋ

ನಲುಮೆ ನಂಬುಗೆ ಎಂಬ ನಾವೊಳು ನ್ಲಲ್ಲನಲ್ಲೆಯರಿಬ್ಬರು!
ಕುಳಿತು ದಾಟಲಿ ಬಾಳಕಡಲನು ಸರಿದು ಒಬ್ಬರಿಂದೊಬ್ಬರು!!

**ಮದುವೆಯ ಮಮತೆಯ ಮಂದಸ್ಮಿತದ ಮಂದಹಾಸದ**
**ಮಂತ್ರಮುಗ್ಧ ಕರೆಯೋಲೆ**

ನನ್ನ ಪ್ರಿಯಗೆಳೆಯರೇ
ಗೆಳತಿಯರೇ
ನಾಡಿನ ಹಿತಚಿಂತಕರೇ
ಕನ್ನಡತಾಯಿಯ ಕಣ್ಮಣಿಗಳೇ
ಕರ್ನಾಟಕದ ವೀರರೇ, ಧೀರರೇ.

ಕಲ್ಯಾಣ ಮಂಟಪಾರೂಢೌ। ದಿವ್ಯಾಲಂಕರಣೋಪೇತೌ।
ಸರಸ್ವತೀ ಸಂತಾನೇಶ್ವರೌ॥ ರಕ್ಷತಾಂಚ ವಧೂವರೌ॥

ವಧೂವರರ ಇಷ್ಟದೇವತಾ ಪ್ರಾರ್ಥನೆ: ಆ ಸಂಯಮ ಶಿಖಾಮಣಿ ಭೀಷ್ಮನಿಗೆ ಜಯವಾಗಲಿ! ಅವನು ಎಡಬಿಡದೆಮ್ಮ ಕಾಯಲಿ!!
ಆ ಬ್ರಹ್ಮಚಾರಿ ಮಹಾಮಹೋಚಾರಿ ಮಾರುತಿಗೆ ಗೆಲುವಾಗಲಿ! ಹಗಲಿರುಳು ನಮ್ಮ ಬೆನ್ ಕಾಯಲಿ!!

---

ಶ್ರೀ ಉಪೇಂದ್ರರಾಯರವರ ಮಗಳು **ಚಿ॥ ರತೀದೇವಿ** ಮತ್ತು ಶ್ರೀ ಶಂಕರರಾಯರ ಮಗ **ಚಿ॥ ಅನಂಗರಾವ್**

---

ಇವರ ವಿವಾಹವೆಂಬ ಮಹೋತ್ಸವ, ತಾ|| 25-5-1955 ಶುಕ್ರವಾರ ಬಸವನಗುಡಿಯಲ್ಲಿ ಹೊಸದಾಗಿ ಕಟ್ಟಿರುವ ಸಂತಾನ ನಿರೋಧ ಶಿಕ್ಷಣಾಲಯದಲ್ಲಿ ನಡೆಯಲಿದೆ. ತಾವು ದಯೆಯಿಟ್ಟು, ಮದುವೆಯ ಕಾರ್ಯಕ್ರಮದಲ್ಲಿ ಭಾಗ ವಹಿಸಿ ಮದುಮಕ್ಕಳಾದ ಸಂತಾನ ಸಂಯಮ ಮೂರ್ತಿಗಳನ್ನು ಹರಸಬೇಕೆಂದು ಕೋರುವ,

ತಮ್ಮ ಹಿತೈಷಿಗಳೂ, ನಾಡಿನ ಶುಭಾಕಾಂಕ್ಷಿಗಳೂ,
ಸಂತಾನನಿರೋಧ ಶಿಕ್ಷಣಾಕಾಂಕ್ಷಿಗಳೂ ಆದ,
ಶ್ರೀ ಉಪೇಂದ್ರರಾವ್,
ಶ್ರೀಮತಿ ರಂಭಾದೇವಿ.

## — ಕಾರ್ಯಕ್ರಮ —

ಬೆಳಿಗ್ಗೆ 6 ಘಂಟೆ—ದೇವತಾ ಪ್ರಾರ್ಥನೆ.

,, 6-30 ಘಂಟೆ—ಹರಿಕಥೆ (ಹರಿಕಥಾ ಸಾಮ್ರಾಟ್ ಶ್ರೀ ಶ್ರೀ ಶ್ರೀ ವೇದ ಬ್ರಹ್ಮ ಬ್ರಹ್ಮಚಾರಿಯರ್ ಬೆಳಗಾಂ ಅವರಿಂದ. ವಿಷಯ : ಬ್ರಹ್ಮಚಾರಿ ಭೀಷ್ಮ)

, 9 ಘಂಟೆಗೆ—ಹರಿಕಥಾ ಮುಕ್ತಾಯ. ವಧೂವರರಿಂದ ಬ್ರಹ್ಮಚರ್ಯಾಶ್ರಮದ ಪ್ರಮಾಣವಚನ ಸ್ವೀಕಾರ. ತಕ್ಷಣ ಮುಹೂರ್ತ.

,, 10 ಘಂಟೆ—ಫಲಸಂತಾನ ನಿರೋಧ ಪುಸ್ತಕ ತಾಂಬೂಲ.

,, 10-30 ಘಂಟೆ—ಮಾರುತಿಯ ಪ್ರಸಾದವಿನಿಯೋಗ. ಸಂಜೆ ಕಾರ್ಯಕ್ರಮ ವಿವರಣೆ.

### ಸಾಯಂಕಾಲ

[ಅರತಕ್ಷತೆ] [ಪ್ರವೇಶಧನ . ಕೇವಲ ಒಂದಾಣೆ]

5 ಘಂಟೆ—ನಗರ ಗಣ್ಯ ರೇಷನ್ ಆಫೀಸರಿಂದ "ಆಹಾರ ಅಭಾವ. ಸಂತಾನ ನಿರೋಧ. ಮದುವೆಯ ಸಮಾರಂಭಗಳು" ಎಂಬ ವಿಚಾರ ಸರಣಿಯ ಮೇಲೆ ರಸವತ್ತಾದ ಭಾಷಣ

6 ಘಂಟೆ—ವಿದೇಶೀ ಸಂತಾನ ವಿಜ್ಞಾನಿಗಳಿಂದ ಭಾಷಣ (ಇಂಗ್ಲೀಷಿನಲ್ಲಿ. ಗ್ರಾಜುಏಟುಗಳಿಗಾಗಿ)

ಸಂಜೆ 6-15 ಘಂಟೆ—ಗೃಹಕೈಗಾರಿಕೆ ಪ್ರದರ್ಶನ (ಮಹಾಜನಗಳಿಗಾಗಿ) ಅದೇ ಸಮಯದಲ್ಲಿ ಅಂತಗೃಹದಲ್ಲಿ ಗಾಂಧಿ ಭಕ್ತರಿಂದ "ಗಾಂಧಿ ಸಂಯಮ" ನೀತಿಬೋಧನೆ (ಪದ್ಯರೂಪದಲ್ಲಿ)

,, 6-30 ಘಂಟೆ—(ಅಕ್ಕಮಹಾದೇವಿಯವರ ವಚನ ಗಾಯನ. "ಸಂತಾನ ಶನಿ" ಎನ್ನುವ ಭಾವಪೂರಿತ ನೃತ್ಯ. ಶ್ರೀಮತಿ 'ಸಂತಾನಲಕ್ಷ್ಮಿ'ಯವರಿಂದ)

## ರಾತ್ರಿ

8 ಘಂಟೆ—ಮಾಯಾದೀಪ (Magic Lantern) ದಿಂದ, "ಸಂತಾನ ನಿರೋಧ" ಎಂಬ ಚಿತ್ರಪ್ರದರ್ಶನ.

8-30 ಘಂಟೆ—ಸಂಯಮಿಗಳು ಅಭ್ಯಾಸಬಲದಿಂದ ಹೊರಗಿನ ಆಕರ್ಷಣೆಗಳಿಗೆ ಬಲಿ ಬೀಳದೆ ಹೇಗೆ "ಸ್ಥಿತಪ್ರಜ್ಞ"ರಾಗಿ ಹಗ್ಗ ಹೆಣೆಯ ಬಲ್ಲರೆಂಬುದಕ್ಕೆ ನಿದರ್ಶನ ೧೦ ಜನ ಸ್ತ್ರೀ ಪುರುಷರು ಒಂದೆಡೆ ಕುಳಿತು ಒಬ್ಬೊಬ್ಬರೂ ಹತ್ತು ಹತ್ತು ಮಾರು ತೆಂಗಿನ ಹಗ್ಗವನ್ನು ಹೊಸೆದು ತೋರಿಸುವ ಚಮತ್ಕಾರ! ಕೂಡಲೇ ಅದನ್ನು ವಧೂವರರಿಗೆ ಬಹುಮಾನವಾಗಿ ಕೊಡುವ ಮಹಾ ಸಮಾರಂಭ!!

9 ಘಂಟೆ—ವಧುವಿನ ತಂದೆಯವರ ಭಾಷಣ (ರೇಷನಿಂಗ್ ಮತ್ತು ಮದುವೆ ಎಂಬ ವಿಚಾರವಾಗಿ)

9-30 ಘಂಟೆ—ನಾಡಿನ ಪರವಾಗಿ ವರನಿಗೆ ಮಾವನು ಬಲಭೀಮ, ಮಾರುತಿಯರ ದಿವ್ಯವಾದ ಕಂಚಿನ ಮೂರ್ತಿಗಳನ್ನು ಓದಿಸುವಿಕೆ! (ಗೀತಾ, ಉಪನಿಷತ್ತುಗಳ ಕೋಲಾಹಲ. ಮರಾಠಾ ಶಾಸ್ತ್ರಿಗಳಿಂದ ಮರಾಠಿಯಲ್ಲಿ ಅಳುವ ಪದ್ಯ!) (ವೈಷ್ಣವ ಜನತೋ, ರಘುಪತಿರಾಘವ ರಾಜಾರಾಂ ಗೀತೆಗಳ ಸಾಮೂಹಿಕ ಗಾನ)

10 ಘಂಟೆ—ಲಾಯರೊಬ್ಬರ ಸಮಕ್ಷಮದಲ್ಲಿ, ಡಾಕ್ಟರೊಬ್ಬರ ಹಿಂಬದಿಯಲ್ಲಿ ವರನಿಂದ ವಧುವಿಗೆ ಜೀವನಾಂಶ ಪತ್ರದ ಉದ್ಘಾಟನಾ ಸಮಾರಂಭ)

ವಧೂವರರು ಕಡೆಯ ದರ್ಶನ ತೆಗೆದುಕೊಂಡು ಅಗಲುವಿಕೆ. "ಬ್ರಹ್ಮಚಾರಿ ಆವಾ" ಪ್ರಸಾದವಿನಿಯೋಗ (ಡಾಕ್ಟರೋಪಚಾರ)

ವಂದೇ ಮಾತರಂ

ಕಾರ್ಯದರ್ಶಿಗಳು: ಶ್ರೀಗಳಾದ ಪ್ರಫುಲ್ಲಯ್ಯ

,, ಕೇಶವಚಂದ್ರಯ್ಯ

ಶ್ರೀಮತಿ ತಾರಿಣೀ ದೇವಮ್ಮ

,, ಊರ್ವಶೀ ಕುಮಾರಿ

ಶ್ರೀ ಚಿದಾನಂದಯ್ಯ ಸಂತಾನಯ್ಯ

ಶ್ರೀ ಅನ್ನದಾನಯ್ಯ.

ಗೌರವ ಕಾರ್ಯದರ್ಶಿ

ಸಂತಾನ ನಿರೋಧಿ ಬಲಭೀಮರಾವ್ ಗಾಮಾ

[ಎಲ್ಲರೂ ಶಾಂತಿ, ಶಿಸ್ತುಗಳನ್ನು ಪಾಲಿಸಬೇಕಾಗಿ ವಿನಂತಿ]

ಜೈ ಬಲಭೀಮ್

— ರಾಜಣ್ಣ.




ಯೊಹೂದಿ ಮೆನುಹ್ಯೂನ್ ಕೂಡ ಇಂತಾದ್ದನ್ನೇ ಕೊಂಡುಕೊಂಡರು!

# ಒಂದು ವರ್ಷ ರಜಾ

ಹಬ್ಬದ ದಿನ ಸಾಯಂಕಾಲ. ರಾಮರಾಯ ಮನೆಗೆ ಬಂದಾಗ ಆಕೆ ಸ್ವಲ್ಪ ಖಿನ್ನಳಾದ್ದ ಹಾಗಿತ್ತು "ಯಾಕೆ? ಇಷ್ಟ್ಯಾದ್ದ ಮುಖ, ಎಂದಾಗ ಆಕೆ ಅಂದಳು. ನಮ್ಮ ಕಿಟ್ಟು ದೇಹಸ್ಥಿತಿ ಪರೀಕ್ಷೆ ಮಾಡಿಸಬೇಕು ಅಂದ್ರೆ ಏನೇನೋ ಹುಚ್ಚು ಮಾತಾಡ್ತಾ ಇದಾನೆ ೩ ದಿನದಿಂದ. ನೀವೇನೋ ಕೆಲಸ ಕಛೇರಿ ಅಂತ ೮-೧೦ ದಿವಸಕ್ಕೂ ಒಂದು ಸಾರಿ ಅವನನ್ನು ಮಾತನಾಡಿಸುಲ್ಲ"

ರಾಮರಾಯರಿಗೆ ಗಾಬರಿ. "ಏನೇ ಹೀಗಂತಿ? ಚಿಕ್ಕ ಹುಡುಗ ಕ್ಲಾಸಿನಲ್ಲಿ ಅವನೇ ಫಸ್ಟು. ಮೇಸ್ಟ್ರಿಗೆ ಅಚ್ಚುಮೆಚ್ಚು, ವಾರ್ಷಿಕೋತ್ಸವದಲ್ಲಿ ಇದ್ದ ನಾಲ್ಕು ಬಹುಮಾನ ಹೊಡೆದಿದ್ದಾನೆ ಅವನೇನು ಹುಚ್ಚು ಮಾತನಾಡಿದನೇ?" ಅಂತ ಕೇಳಿದರು

"ಅವನ್ನೇ ಕೇಳಿ" ಅಂತ ಆಕೆ ಮುಗುಮ್ಮಾಗಿ ಅಂದಳು. ಕಿಟ್ಟೂನ ಕರೆಸಿ ಏನು ಸಮಾಚಾರ ಅಂತ ಕೇಳಿದಾಗ ಅವನಂದ "ಅಪ್ಪಾ! ನನಗೆ ಈ ಸರ್ತಿ ಬೇಸಿಗೆ ರಜಾನ ಒಂದು ವರ್ಷ ಕೊಟ್ಟಿದಾರಪ್ಪಾ!" ಅಂತ.

—ಆಗಲೇ ರಾಮರಾಯರಿಗೆ ಹೆಂಡತಿ ಹೇಳಿದ್ದು ದಿಟ ಅನ್ನಿಸಿತು ಯಾರಾದರೂ ಓದೋ ಹುಡುಗರಿಗೆ ಒಂದು ವರ್ಷ ರಜಾ ಕೊಡ್ತಾರೆಯೇ? ಆದರೂ ಕಿಟ್ಟು ಮಿಕ್ಕ ಮಾತನ್ನೆಲ್ಲಾ ಸರಿಯಾಗಿಯೇ ಆಡುತ್ತಿದ್ದಾನೆ. ಪೂರ್ತಿ ಕೇಳೋಣ ಅಂತ.

"ಯಾರಪ್ಪಾ ಕಿಟ್ಟು ಒಂದು ವರ್ಷ ರಜಾ ಕೊಟ್ಟೋರು, ಯಾರು ಹಾಗೆ ಹೇಳಿದರು ಮಗು? ಕ್ಲಾಸ್ ಮಾಸ್ತರೆ? ದೊಡ್ಡ ಮಾಸ್ತರೆ?"

"ಮಾಸ್ತರು ಹೇಳಿದ್ದಲ್ಲಪ್ಪಾ! ನಾನೇ ಓದಿದೆ ಪೇಪರಿನಲ್ಲಿ. ಈಗ ನೋಡಪ್ಪಾ ನನಗೆ ೧೩॥ ವರ್ಷ. ಎಸ್ಸೆಸ್ಸೆಲ್ಸೀಗೆ ಕಟ್ಟಿದ್ದೇನೆ ಖಂಡಿತ ಪಾಸಾಗುತ್ತೆ. ಆದರೆ ಇಂಟರ್‌ಗೆ ಸೇರಿಕೋಬೇಕಾದರೆ ಇನ್ನು ಮೇಲೆ ೧೫ ವರ್ಷ ಆಗಿರಬೇಕು, ಸ್ವಲ್ಪ ಚಿಗುರೆ ಮೀಶೆ ಬಂದಿರಬೇಕು, ಗಂಟಲು ಒಡೆದಿರಬೇಕು ಅಂತೆಲ್ಲ ಸರ್ಕಾರದ ಹುಕುಂ. ತುಂಬ ಜಾಣ ಹುಡುಗರಾದರೆ ೧೪॥ ವರ್ಷ ಪರವಾಗಿಲ್ಲವಂತೆ' ಅಂದ ಮೇಲೆ ನನಗೆ ರ್‍ಯಾಂಕು ಬಂದರೂ ಕೂಡ, ಒಂದು ವರ್ಷ ರಜಾ ಅಲ್ಲವೇನಪ್ಪಾ! ಬೇಸಿಗೆ ರಜಾದ ಜತೆಗೆ ಅಲ್ಲವೇಪ್ಪಾ!" ಅಂದ ಕಿಟ್ಟು.

ಆಗ ರಾಮರಾಯನಿಗೆ ಜ್ಞಾನೋದಯ! ಅಯ್ಯೋ! ದೇವರೇ! ಇಂತಹ ಚೂಟಿ ಹುಡುಗ ಕೂಡ ಒಂದು ವರ್ಷ ರಸ್ತೆ ಅಲೆಯುವಂತಾದರೆ ಓದು ಬರಹ ತಪ್ಪಿದರೆ, ರಾಜಕೀಯಕ್ಕೇ ಧುಮುಕಿ ಎಲ್ಲಿ ಕೆಟ್ಟು ಹೋಗ್ತಾನೋ ಅಂತ ಭಯ. ಈಗ ಜಾತಕ ಹಿಂದೆಹಾಕುಕ್ಕೆ ಆಗುಲ್ಲ. ಏನು ಕಷ್ಟಾ ಬಂತಪ್ಪಾ! ಬಡ ಬುದ್ಧಿವಂತನಿಗೆ ಅಂತ ಹಬ್ಬದಲ್ಲಿ ಬೆಲ್ಲದ ಜತೆಗೆ ಬೇವಿನ ಅನುಭವವನ್ನೂ ಪಡೆದ. ರಾಮರಾಯ.

—ನ. ವೆಂ. ಆಚಾರ್

# ಕೊರವಂಜಿ

**ಬಳೇಪೇಟೆ : : ಬೆಂಗಳೂರು 2**

— o —

**ಬಿಡಿ ಪ್ರತಿ ಕೇವಲ ನಾಲ್ಕಾಣೆ**

**ವಾರ್ಷಿಕ ಚಂದಾ: ಕೇವಲ 3 ರೂ ಗಳು (ಅಂಚೆ ವೆಚ್ಚ ಸಹಿತ)**

**ನಮ್ಮ ಹೊಸ ಮಾರಾಟಗಾರರು:**

Sri S BHAGAVANTH SHANBHOGHA,
Sri Anjaneya Store,
Saligrama S. (Kanara)

M/s D GANAPATHI RANADE,
Lakkavalli

M/s M R KESHAVASETTY & BROS,
Davangere

M/s BASAVESWARA NEWS AGENCY,
Bagalkot

# ನಿಮ್ಮ ಆರೋಗ್ಯಕ್ಕೆ ಸಮತೂಕಾಹಾರವನ್ನು ಸೇವಿಸಿರಿ
















ಪ್ರತಿಯೊಂದು ಆಹಾರಪದಾರ್ಥದಲ್ಲಿ ಬೇರೆ ಬೇರೆ ಆಹಾರಾಂಶಗಳಿರುತ್ತವೆ. ಅದಕ್ಕೋಸ್ಕರ, ಆರೋಗ್ಯ ಮತ್ತು ಶಕ್ತಿಗೆ ಬೇಕಾದ ಎಲ್ಲಾ ಐದು ಆಹಾರಾಂಶಗಳನ್ನು ಒದಗಿಸುವುದಕ್ಕೆ ನಾವು ನಾನಾತರಹದ ಆಹಾರಪದಾರ್ಥಗಳನ್ನು ತಿನ್ನಬೇಕು. ಇದಕ್ಕೆ ಸಮತೂಕಾಹಾರವೆಂದು ಹೆಸರು ಆದುದರಿಂದ ಸಮತೂಕಾಹಾರವು, (1) ವಿಟಮಿನ್ನುಗಳು, (2) ಪ್ರೋಟೀನುಗಳು, (3) ಖನಿಜಪದಾರ್ಥಗಳು, (4) ಕಾರ್ಬೋಹೈಡ್ರೇಟುಗಳು ಮತ್ತು (5) ಕೊಬ್ಬು, ಇವುಗಳನ್ನೆಲ್ಲಾ ಒಳಗೊಂಡಿರಬೇಕು. ಎಲ್ಲಾ ಐದು ಆಹಾರಾಂಶಗಳು ಅವಶ್ಯಕವಾದುವು ಶಾಶ್ವತವಾದ ಶಕ್ತಿಯನ್ನೊದಗಿಸುವ ಕೊಬ್ಬುಗಳಲ್ಲಿ ಡಾಲ್ಡ ಅತ್ಯನುಕೂಲ ಮತ್ತು ಆರೋಗ್ಯವಾದವುಗಳಲ್ಲೊಂದು. ಯಾವ ವಿಧವಾದ ಅಡಿಗೆಗೂ ಉಪಯುಕ್ತವಾಗಿದ್ದು, ಡಾಲ್ಡ ಯಾವಾಗಲೂ ಸ್ವಚ್ಛವಾಗಿ, ಹಸನಾಗಿ ಮತ್ತು ಶುದ್ಧವಾಗಿ ಸೀಲ್‌ಮಾಡಿದ ಡಬ್ಬಗಳಲ್ಲಿ ದೊರೆಯುತ್ತದೆ. ಸಮತೂಕಾಹಾರದ ಮೇಲೆ ಸಂಪೂರ್ಣವಾದ, ಉಪಯೋಗಕರವಾದ ಮತ್ತು ಉಚಿತ ಸಲಹೆಗಳಿಗೆ ಈ ದಿನ ಅಥವ ನಿಮಗೆ ಬೇಕಾದಾಗ ಬರೆಯಿರಿ.—

ದಿ ಡಾಲ್ಡ ಅಡ್ವೈಸರಿ ಸರ್ವಿಸ್
ಪೋಸ್ಟ್ ಬಾಕ್ಸ್ ನಂ 353, ಬೊಂಬಾಯಿ 1

## ಶಕ್ತಿಗಾಗಿ ಡಾಲ್ಡದಲ್ಲಿ ಅಡಿಗೆಮಾಡಿರಿ



ಸಮತೂಕಾಹಾರದಲ್ಲಿ ನಿಮಗೆ ಬೇಕಾದ ಕೊಬ್ಬನ್ನು ಒದಗಿಸುತ್ತದೆ

HVM. 175-50 KN

FACE — the index of Your Charm






RAJA SNOW

Protects the Face enhances its Charm

MANYAM & CO.
BANGALORE, MADRAS, MATHURAI, BOMBAY.



**VITOFERRIN**

MYSORE INDUSTRIAL & TESTING LABORATORY LTD. MALLESWARAM BANGALORE

# ವೈಟೋಫೆರಿನ್

## (ಆಧುನಿಕ ಶಕ್ತಿವರ್ಧಕ ಟಾನಿಕ್)

ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನು ಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್‌ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತ ಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಕಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹ ದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ.



ತಯಾರಕರು :

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ. ಲಿಮಿಟೆಡ್**

ಮಲ್ಲೇಶ್ವರಂ - - - ಬೆಂಗಳೂರು 3.